# ಕನ್ನಡ ಹಸ್ತಪ್ರತಿಗಳಲ್ಲಿ ದೈವೀ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯ,ಹಂಪಿ, ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ಕ್ರಿಷ್ಣಪ್ಪ ಯಂಕಪ್ಪ

ಮಾರ್ಗದರ್ಶಕರು
ಡಾ.ವಿ.ಎಸ್.ಬಡಿಗೇರ
ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೯-೨೦೧೦

# ಕನ್ನಡ ಹಸ್ತಪ್ರತಿಗಳಲ್ಲಿ ದೈವೀ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯ,ಹಂಪಿ, ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
**ಕ್ರಿಷ್ಣಪ್ಪ ಯಂಕಪ್ಪ**



ಮಾರ್ಗದರ್ಶಕರು
**ಡಾ.ವಿ.ಎಸ್.ಬಡಿಗೇರ**
ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೯~೨೦೧೦

# ಸಂಶೋಧಕರ ಪ್ರಮಾಣ ಪತ್ರ

**ಕನ್ನಡ ಹಸ್ತಪ್ರತಿಗಳಲ್ಲಿ ದೈವೀ ನೆಲೆಗಳು** ಎಂಬ ನಿಬಂಧವನ್ನು **ಡಾ.ವಿ.ಎಸ್.ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಕ್ರಿಷ್ಣಪ್ಪ ಯಂಕಪ್ಪ
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ : ೧೪.೯.೨೦೧೦

# ಮಾರ್ಗದರ್ಶಕರ ಪ್ರಮಾಣ ಪತ್ರ

**ಕನ್ನಡ ಹಸ್ತಪ್ರತಿಗಳಲ್ಲಿ ದೈವೀ ನೆಲೆಗಳು** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಕ್ರಿಷ್ಟಪ್ಪ ಯಂಕಪ್ಪ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೧೫. ೬. ೨೦೧೦
ಸ್ಥಳ: ವಿದ್ಯಾರಣ್ಯ

**ಡಾ.ವಿ.ಎಸ್.ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

## ಪರಿವಿಡಿ



✿✿✿

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧. ಉದ್ದೇಶ

೧.೨. ವ್ಯಾಪ್ತಿ

೧.೩. ಸ್ವರೂಪ

೧.೪. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ನಮ್ಮ ಭಾರತೀಯ ಪರಂಪರೆಯಲ್ಲಿ ಹಸ್ತಪ್ರತಿಗಳು ತಮ್ಮದೇ ಆದಂತಹ ಧಾರ್ಮಿಕ ಹಾಗೂ ಸ್ವರೂಪವನ್ನು ಹೊಂದಿವೆ. ಹಸ್ತಪ್ರತಿಗಳ ಪೋಷಣೆ, ರಕ್ಷಣೆ, ಲಿಪೀಕರಣ ಹಾಗೂ ಪ್ರಸರಣ ಇವು ಹೆಚ್ಚು ಧಾರ್ಮಿಕ ಆವರಣದಲ್ಲಿಯೇ ಬೆಳೆದು ಬಂದಿರುವುದು ವಿಶೇಷ. ವಿಚಿತ್ರವೆಂದರೆ ಹಸ್ತಪ್ರತಿಗಳ ಪಠ್ಯಗಳಿಗೂ ಸಂಬಂಧಿಸಿದ ಧರ್ಮ ಹಾಗೂ ಆಚರಣೆಗಳಿಗೂ ಪರಸ್ಪರ ಸಂಬಂಧವೇ ಇಲ್ಲದಿದ್ದರೂ ಇವು ಧಾರ್ಮಿಕಾವರಣ ಪಡೆದಿದ್ದು ಕುತೂಹಲಕರ ಸಂಗತಿಯಾಗಿದೆ. ಹಸ್ತಪ್ರತಿಗಳು ಆಗಮಿಕ ಹಾಗೂ ಲೌಕಿಕ ಬದುಕಿನ ಎರಡು ಮಜಲುಗಳನ್ನು ಹೊಂದಿದ್ದು, ಅವುಗಳ ಧರ್ಮಾತೀತ ನೆಲೆಯನ್ನು ಸೂಚಿಸುತ್ತದೆ.

ಪ್ರಾಚೀನ ಕಾಲದಿಂದಲೂ ಮರದಪೂಜೆ, ನಿಸರ್ಗದಪೂಜೆ ಮತ್ತು ಮೂರ್ತಿಪೂಜೆಗಳನ್ನು ಸಮುದಾಯಗಳು ಮಾಡುತ್ತಾ ಬಂದಿವೆ. ಕಾರಣ ಪ್ರತಿಯೊಂದನ್ನೂ ದಾರ್ಶನಿಕ ನೆಲೆಯಲ್ಲಿ ಕಾಣುವ ಹಂಬಲ ಭಾರತೀಯರ ಮನೋಧರ್ಮದಲ್ಲಿ ಕಂಡುಬರುತ್ತದೆ. ಹೀಗೆ ವಿದ್ಯೆಯಂಥ ಲೌಕಿಕ ಸಂಗತಿಯೂ ಧಾರ್ಮಿಕಾವರಣ ಪಡೆದುಕೊಂಡು ಬಂದಿತು. ಅಕ್ಷರ ಸೃಷ್ಟಿಯೇ ವಿದ್ಯೆ ಎಂಬುದು ಪರಂಪರೆಯಲ್ಲಿ ಸಾಗಿಬಂದಿದೆ. ಆದ್ದರಿಂದಲೇ ಧಾರ್ಮಿಕವಾಗಿ ಆಯಾ ಧರ್ಮದವರು ತಮಗೆ ಅನುಕೂಲವಾಗುವಂತೆ ಆಚಾರ–ವಿಚಾರಗಳನ್ನು ಮಾಡುತ್ತಾ ಬಂದಿದ್ದಾರೆ. ಮಠ ಮಂದಿರಗಳಲ್ಲಿ ವಿದ್ವಾಂಸರು ಸ್ವಾಮಿಗಳು ಪುರಾಣ–ಪುಣ್ಯ ಕಥೆಗಳು ಮತ್ತು ಹರಿಕಥೆಗಳನ್ನು ಹೇಳುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಮತ್ತು ಬಿಡುವಿನ ವೇಳೆಯಲ್ಲಿ ಜನರು ಅವುಗಳನ್ನು ಕೇಳುತ್ತಿದ್ದರು. ಇಂತಹ ವಿಚಾರಗಳಿಂದ ಸಮಾಜದಲ್ಲಿ ಶಾಂತಿ, ಸಂಮೃದ್ಧಿ ನೆಲೆಸುತ್ತದೆ. ಮಾನವನ ಆಂತರಿಕ ಮನಸ್ಸು ವಿಕಾಸವಾಗುತ್ತದೆ ಎಂದು ನಂಬಿದ್ದರು. ಇವೆಲ್ಲವುಗಳು ಹಸ್ತಪ್ರತಿಗಳಲ್ಲಿಯೇ ಇರುತ್ತಿದ್ದವು. ಪ್ರತಿ ಅಧ್ಯಾಯ ಬರೆಯುವಾಗ ಮೊದಲು ಕೊನೆಯಲ್ಲಿ ಪೂಜೆಯಿಂದಲೇ ಪ್ರಾರಂಭವಾಗುತ್ತಿದ್ದು ವಿಶೇಷವಾಗಿದೆ.

## ೧.೧. ಉದ್ದೇಶ

ಹಸ್ತಪ್ರತಿಗಳನ್ನು ತ್ರಿಮೂರ್ತಿಸ್ವರೂಪವೆಂದೂ, ದೈವಸ್ವರೂಪವೆಂದೂ ಬ್ರಹ್ಮ ವಿಷ್ಣು, ಮಹೇಶ್ವರರೆಂದೂ ಪರಿಭಾವಿಸಲಾಗಿದೆ. ತಾಳೆಗರಿಗಳಿಗೆ ಸುತ್ತುವದಾರ, ಅಕ್ಷರಗಳು ಉದ್ದ ಅಗಲ ಪ್ರಮಾಣಬದ್ಧತೆ ಕೂಡ ದೈವೀನೆಲೆ ಪಡೆದಿತ್ತು. ಲಿಪಿಕಾರರು ರಂಧ್ರ ಹಾಕುವಾಗ ಒಂದು ರಂಧ್ರ ಹಾಕಿದರೆ ಬಲಿ, ಎರಡು ರಂಧ್ರಗಳು ಹಾಕಿದರೆ ಜಯ ಲಭಿಸುತ್ತದೆ. ಬಣ್ಣ ಹಾಕುವುದರಲ್ಲಿ ಕೆಂಪು ಬಣ್ಣ ಸಂಮೃದ್ಧಿ, ಕೃಷ್ಣ ಬಣ್ಣ ಹಾಕಿದರೆ ಸಂಪತ್ತು ಲಭಿಸುತ್ತದೆ. ಮೇಲೊಂದು ಕಳೆಗೊಂದು ತೆಳುವಾದ ಹಲಗೆಗಳು ಅವುಗಳು ದೇವಾಲಯದ ಮೂರ್ತಿಗಳಂತೆ ವರ್ಣಚಿತ್ರಗಳಿಂದ ಕಂಗೊಳಿಸುತ್ತವೆ. ತಾಳೆಗರಿಗಳಲ್ಲಿ ಬರೆದಿರುವ ಅಕ್ಷರಗಳು ಒಂದು ಸಾವಿರ ವರ್ಷದವರೆಗೆ ಜೀವಂತವಾಗಿದ್ದು, ಎಂಟುನೂರಾಒಂದು ಗುಣಗಳನ್ನು ಪಡೆದುಕೊಂಡಿರುತ್ತವೆ.

ತಾಳೆಗರಿಗಳನ್ನು ಬರೆದಿರುವ ಲಿಪಿಕಾರರ ಮೇಲೆಯೂ ಧಾರ್ಮಿಕ ನಂಬಿಕೆಗಳಿವೆ. ಶೀಘ್ರವಾಗಿ ಬರೆಯುವವನು ತೇಜಶ್ಯಾಲಿ. ಅಶೌಚ ಪ್ರಾಪ್ತವಾದಲ್ಲಿ ಗ್ರಂಥ ಬರೆದರೆ ದರಿದ್ರನಾಗುವನು. ಜನ್ಮದಿನಗಳಲ್ಲಿ ಬರೆದರೆ ಆಯಸ್ಸು ಕುಗ್ಗುವುದು, ಬರಹಗಾರರು ಶ್ರದ್ಧೆ, ಮನಸ್ಥೈರ್ಯ, ತಾಳ್ಮೆ, ಸತತ ಅಭ್ಯಾಸ, ಆತ್ಮವಿಶ್ವಾಸಗಳನ್ನು ಹೊಂದಿರಬೇಕು. ಲಿಪಿಕಾರ ಬರೆದಿರುವ ಅಕ್ಷರಗಳು ಎಷ್ಟು ಕಾಲವಿರುವಿವೋ ಅಷ್ಟುಕಾಲ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ. ಇಂತಹ ಗ್ರಂಥಗಳನ್ನು ಯಾರು ಪರಿಶ್ರಮದಿಂದ ಪಠಿಸುವವರೂ ಮತ್ತು ಶ್ರದ್ಧೆಯಿಂದ ಕೇಳುವವರೂ ಕೂಡ ಸ್ವರ್ಗದಲ್ಲಿ ಪೂಜಿತರಾಗುತ್ತಾರೆ. ಹಸ್ತಪ್ರತಿಗಳನ್ನು ರಕ್ಷಿಸುವವರೂ ಸುಖಫಲಗಳು ಪ್ರಾಪ್ತಿಯಾಗುತ್ತವೆ ಎಂಬ ಅನೇಕ ನಂಬಿಕೆಗಳು ಬೇರೂರಿವೆ.

ಕನ್ನಡ ಹಸ್ತಪ್ರತಿಗಳು ಮಾನವನ ಉನ್ನತಿಗಾಗಿ, ಸಹಜೀವನಕ್ಕಾಗಿ ಹಂಬಲಿಸಿದ ಸಾಮಾಜಿಕವಾದ ನಿವಾರಣೋಪಾಯುಗಳಾಗಿವೆ. ಮಳೆಗಾಗಿ, ಬೆಳೆಗಾಗಿ, ಆರೋಗ್ಯ ಸಂವರ್ಧನೆಗಾಗಿ, ಔಷದೋಪಚಾರಕ್ಕಾಗಿ, ನೆಲ, ಜಲ, ಭವಿಷ್ಯಕ್ಕಾಗಿ, ಪ್ರಾಣಿ ಪಕ್ಷಿಗಳ ನೆಲೆ ಬೆಲೆಯ ತಿಳುವಳಿಕೆಗಾಗಿ, ರಸಜ್ಞಾನಕ್ಕಾಗಿ, ಹಾವು–ಚೇಳು ಕಡಿತ ನಿವಾರಣೋಪಾಯಗಳಿಗಾಗಿ, ಅಡಿಗೆ ವಿಚಾರಕ್ಕಾಗಿ ಹೀಗೆ ಲೌಕಿಕ ಅಗತ್ಯಗಳ ಪೂರೈಕೆಗಾಗಿ ಹುಟ್ಟಿದ ಹಲವು ಕೃತಿಗಳು ಈ ದೈವೀನೆಲೆಯಲ್ಲಿ ಸೇರಿಕೊಂಡವು. ಮಾನವನ ಪ್ರಾಮಾಣಿಕ ಶ್ರಮ ಮತ್ತು ಶ್ರದ್ಧೆಗಳು ನೀತಿ–ನಿಯಮಗಳಾಗಿ ಸನಾತನ ಸಂಹಿತೆಗಳಿಗಾಗಿ ಪರಿವರ್ತನೆಗೊಂಡವು.

ಕನ್ನಡ ಹಸ್ತಪ್ರತಿಗಳು ದಾನದ ಪ್ರತೀಕವಾಗಿ ಅರಸರ ಸಪ್ತಸಂತಾನದ ಕರ್ತವ್ಯಗಳಲ್ಲಿ ಒಂದೆಂದೂ, ಶಾಸ್ತ್ರದಾನ, ಗ್ರಂಥ ಪ್ರತಿಷ್ಠೆಯ ಪುಣ್ಯ ಪ್ರತೀಕವೆಂದೂ ಧರ್ಮ ಪೀಠಾರೋಹಣ ಪ್ರಸಂಗದ ಜ್ಞಾನದುಡುಗೊರೆಗಳೆಂದೂ, ಬದುಕಿನ ಸ್ವಸುಖದ ಪರಸುಖದ ಕಾಮಧೇನುಗಳೆಂದೂ ಭಾವಿಸಿ ಇಂದಿನವರೆಗೂ ಕನ್ನಡಿಗರು ಅವುಗಳನ್ನು ಪೂಜ್ಯಭಾವನೆಯಿಂದ ಸಂರಕ್ಷಿಸಿಕೊಂಡು ಬರುತ್ತಿದ್ದಾರೆ. ಅಂದು ಪ್ರಮುಖ ದೇವಸ್ಥಾನಗಳಿಗೆ ಇಬ್ಬರು ಸ್ತ್ರೀಯರನ್ನು ಹನ್ನೆರಡು ಹಸುಗಳನ್ನು ದಾನದ ರೂಪವಾಗಿ ನೀಡಿದ್ದು, ಬೊಮ್ಮಗಾವುಂಡನು ಅಬ್ಬಲೇಶ್ವರ ದೇವಾಲಯಕ್ಕೆ ಕುದುರೆ ಓಡುವಷ್ಟು ಭೂಮಿಯನ್ನು ನೀಡಿದ್ದು ಮತ್ತು ಚಾಲುಕ್ಯ ಜಗದೇಕಮಲ್ಲನ ರಾವುತನು ಕೇದಾರೇಶ್ವರ ದೇವಾಲಯಕ್ಕೆ

ಹಳ್ಳಿಯೊಂದನ್ನು ದಾನವಾಗಿ ನೀಡಿದ್ದು, ಪ್ರಾಚೀನ ಕಾಲದಲ್ಲಿ ದಾನದ ಪ್ರತಿಷ್ಠೆ ಬಹುಮುಖ್ಯವಾದ ಪಾತ್ರವಹಿಸಿರುವುದನ್ನು ಶಾಸನಗಳಲ್ಲಿ, ಹಸ್ತಪ್ರತಿಗಳಲ್ಲಿ ನೋಡುತ್ತೇವೆ.

ಹಸ್ತಪ್ರತಿಗಳನ್ನು ಇಂದೂ ಕೂಡ ಪೂಜಿಸುವುದನ್ನು ಕಾಣಬಹುದು. ಕೋಡೆಕಲ್ಲ ಚೆನ್ನಬಸವೇಶ್ವರ ಮಠಗಳಲ್ಲಿ ಕಾಲಜ್ಞಾನದ ಹಸ್ತಪ್ರತಿಗಳು, ಬಾಗಲಕೋಟೆಯ ಪ್ರಭುರಾಜೇಂದ್ರಮಠದಂಥ ವೀರಶೈವ ಮಠಗಳಲ್ಲಿ ಗದ್ದುಗೆಯ ಮೇಲಿಟ್ಟು ಪೂಜಿಸುತ್ತಾರೆ. ಮನೆಗಳ ದೇವರ ಜಗುಲಿಯ ಮೇಲೆ ಗಂಟುಗಳಲ್ಲಿ ಮೂಲಕ ಕಟ್ಟಿರುತ್ತಾರೆ. ವೀರಶೈವ ಮಠಗಳಲ್ಲಿ ಅಧಿಕಾರವನ್ನು ವಹಿಸಿಕೊಂಡಾಗ ಮೊದಲಿಗೆ ಹಸ್ತಪ್ರತಿಗಳನ್ನು ಕಾಣಿಕೆ ರೂಪದಲ್ಲಿ ಕೊಟ್ಟು ಪಟ್ಟಾಧಿಕಾರ ಮಾಡುವುದನ್ನು ಕಾಣಬಹುದು. ಕಾರಣ ಈ ಹಸ್ತಪ್ರತಿಗಳಂತೆ ತಮ್ಮ ಜವಾಬ್ದಾರಿಯನ್ನು ವಹಿಸಿಕೊಂಡು ಎಲ್ಲರೊಂದಿಗೆ ಸ್ನೇಹದಿಂದ, ದಕ್ಷತೆಯಿಂದ ಕಾರ್ಯಕೈಗೊಳ್ಳಲಿ ಎಂಬುದು ನಂಬಿಕೆ. ಇವುಗಳೆಲ್ಲವುಗಳು ದಾರ್ಶನಿಕತೆಗೆ ವಿಶೇಷವಾಗಿ ಪ್ರೋತ್ಸಾಹ ನೀಡಿದ್ದಾರೆ. ಆದ್ದರಿಂದಲೇ ಜನರು ತಮ್ಮ ಲೌಕಿಕ ಬಯಕೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಹಸ್ತಪ್ರತಿಗಳನ್ನು ಪ್ರಸ್ತುತ ದಿನಗಳಲ್ಲಿಯೂ ಪೂಜಿಸುತ್ತಾರೆನ್ನುವ ಆಸಕ್ತಿದಾಯಕ ನೆಲೆಗಳ ಕುರಿತು ಅಧ್ಯಯನಿಸುವುದು ಈ ನಿಬಂಧದ ಮುಖ್ಯ ಉದ್ದೇಶ.

### ೧.೨. ವ್ಯಾಪ್ತಿ

ಲಭ್ಯವಿರುವ ಕನ್ನಡ ಹಸ್ತಪ್ರತಿಗಳನ್ನು ಇಲ್ಲಿ ಮುಖ್ಯವಾಗಿಟ್ಟುಕೊಳ್ಳಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಗ್ರಂಥಭಂಡಾರದಲ್ಲಿರುವ ಹಸ್ತಪ್ರತಿಗಳು ನನ್ನ ಅಧ್ಯಯನದ ಮುಖ್ಯ ಆಕರಗಳು. ಲಿಪಿ, ಲಿಪಿಕಾರ ಪೋಷಕ, ಓದುಗ ಇವರ ಸಹ ಸಂಬಂಧದೊಂದಿಗೆ ಕನ್ನಡ ಹಸ್ತಪ್ರತಿ ಜಗತ್ತು ಪಡೆದುಕೊಂಡ ಅರ್ಥ ವಿಸ್ತಾರ, ಬಹುಮುಖ್ಯವಾಗಿ ಅದರ ಪಾರಮಾರ್ಥಿಕ ನೆಲೆಗಳನ್ನು ಗುರುತಿಸುವುದು. ಆ ಮೂಲಕ ಸೃಜನಶೀಲ ಕ್ರಿಯೆಯಾದ ಬರವಣಿಗೆ ಪಡೆದುಕೊಳ್ಳುವ ಸನಾತನತೆಯನ್ನು ಪತ್ತೆ ಮಾಡುವುದು ಇಲ್ಲಿನ ಮುಖ್ಯ ಭಿತ್ತಿಯಾಗಿದೆ.

### ೧.೩. ಸ್ವರೂಪ

ಈ ನಿಬಂಧವು ಒಟ್ಟು ಐದು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ ಎರಡನೆಯ ಅಧ್ಯಾಯದಲ್ಲಿ 'ಭಾರತೀಯ ಆರ್ಷೇಯ ಚಿಂತನೆಗಳು ಹಾಗೂ ವಿದ್ಯೆ' ನಮ್ಮ ಭಾರತ ಹಲವು ಧರ್ಮಗಳ ತವರೂರಾಗಿದೆ. ಒಂದೊಂದು ಧರ್ಮದಲ್ಲಿ ತಮ್ಮದೆ ಧಾರ್ಮಿಕ ಹಿನ್ನೆಲೆಗಳನ್ನಾಧರಿಸಿ ದೇವರನ್ನು ಆರಾಧಿಸುವ ರೂಢಿ ಸಂಪ್ರದಾಯಗಳಿವೆ. ಸಂಸಾರದಲ್ಲಿ ಮುಳುಗಿದವರನ್ನು ಮೇಲೆತ್ತುವ, ಸಂಜೀವಿನಿ ಎಂದರೆ ಧರ್ಮ. ಅದುವೆ ಮುಕ್ತಿಗೆ ಮಾರ್ಗವನ್ನು ತೋರಿಸಿಕೊಡುತ್ತದೆ. ಹಿಂದಿನ ಕಾಲದಿಂದಲೂ ನಿಸರ್ಗಪೂಜೆ, ಪ್ರಕೃತಿ ಪೂಜೆಗಳನ್ನು ಮಾಡುತ್ತಾ ಬಂದಿದ್ದಾರೆ. ಇದರಿಂದ ಮಾನವನಿಗೆ ಶಾಂತಿ ಸಂಮೃದ್ಧಿ, ಸನ್ಮಾರ್ಗಗಳು ಪ್ರಾಪ್ತವಾಗುತ್ತವೆ. ಇವುಗಳಂತೆ ವಿದ್ಯೆಯೂ ಮಾನವನನ್ನು ಪಶುತನದಿಂದ ಪಾಮರರನ್ನಾಗಿಸುತ್ತದೆ. ವಿದ್ಯೆ ಎಂಬುದು ಆತ್ಮಜ್ಞಾನ. ಆತ್ಮಜ್ಞಾನ ಇತರರೊಡನೆ ಸ್ನೇಹ ಜೀವಿನ್ನಾಗಿಸಿ ಹೊಸಮಾರ್ಗವನ್ನೇ ಕಂಡುಕೊಂಡು ಮಹೋನ್ನತಿಯ ಸ್ಥಾನಕ್ಕೇರಿಸಿ ಉನ್ನತ ವ್ಯಕ್ತಿಯನ್ನಾಗಿಸುತ್ತದೆ.

ಅಧ್ಯಾಯ ಮೂರರಲ್ಲಿ 'ಲಿಪಿ ಭಾಷೆ ಬರವಣಿಗೆ ಹಾಗೂ ದೈವೀನೆಲೆಗಳು' ಕುರಿತು ಚರ್ಚಿಸಲಾಗಿದೆ. ಲಿಪಿ, ಭಾಷೆ, ಬರವಣಿಗೆ ಮೂರು ಒಂದಕ್ಕೊಂದು ಅವಿನಾಭಾವ ಸಂಬಂಧ ಹೊಂದಿವೆ. ಲಿಪಿಕಾರರ ಆತ್ಮಸ್ಥೈರ್ಯಗಳೇ ಅದ್ವಿತೀಯ ಕಾಣಿಕೆಗಳಾಗಿವೆ. 'ವೇದಗಳನ್ನು ಬರೆದಿಡುವವರು ನರಕಕ್ಕೆ ಹೋಗುತ್ತಾರೆ' ಎಂಬುದು ಮಹಾಭಾರತ ಉವಾಚ ಕೆಳಸಮುದಾಯಗಳನ್ನು ಅಕ್ಷರ ಕಲಿಕೆಯಿಂದ ದೂರಿಡುವ ಹುನ್ನಾರ ಇಂಥ ಅನೇಕ ಆರ್ಷೇಯ ಮಾತುಗಳಲ್ಲಿ ಕಾಣುತ್ತದೆ. ಮನಸ್ಸಿಗೆ ಸಂಬಂಧಿಸಿದ್ದು ಶ್ರೇಷ್ಠ ದೇಹ ಮೂಲವಾದದ್ದು ಕನಿಷ್ಠ ಎನ್ನುವ ತಾತ್ವಿಕ ಧೋರಣೆಗಳು ಕಂಡುಬರುತ್ತವೆ. ಬೌದ್ಧರ ಕಾಲದಲ್ಲಿ ಲಿಪಿಕಾರರಿಗೆ ಮನ್ನಣೆ ನೀಡಿದ್ದಾರೆ. ಜೈನಧರ್ಮದ ವೃಷಭದೇವನು ಬ್ರಾಹ್ಮಿಲಿಪಿಯನ್ನು ತನ್ನ ಮಕ್ಕಳಿಗೆ ಕಲಿಸುತ್ತಿದ್ದರು ಎಂಬ ಪ್ರತೀತಿ ಇದೆ. ಮಾನವರನ್ನು ಸಹಜ ಸ್ಥಿತಿಯಿಂದ ಉನ್ನತರಕ್ಕೇರಿಸುವ ಪುಸ್ತಕಗಳನ್ನು 'ತ್ರಿಮೂರ್ತಿಸ್ವರೂಪಿ'ಗಳೆಂದು ಪೂಜಿಸುತ್ತಾರೆ.

ಅಧ್ಯಾಯ ನಾಲ್ಕರಲ್ಲಿ 'ಕನ್ನಡ ಹಸ್ತಪ್ರತಿ ಹಾಗೂ ಬರವಣಿಗೆ' ಕುರಿತು ಚರ್ಚಿಸಲಾಗಿದೆ. ಸಂಸ್ಕೃತಿಯಲ್ಲಿ ಬರವಣಿಗೆಯು ಸಾಮುದಾಯಿಕ, ಸೃಜನಶೀಲತೆಯನ್ನು ಬೆಳೆಸುತ್ತದೆ. ಕುಮಾರವ್ಯಾಸನ 'ವಿರಾಟಪರ್ವ'ವನ್ನು ಇಂದಿನ ದಿನಮಾನಗಳಲ್ಲಿಯೂ ಪಠಿಸಿದರೆ ಮಳೆಬರುತ್ತದೆ ಎಂಬ ನಂಬಿಕೆಯಿದೆ. ರಟ್ಟಮತ ಕೃತಿ ವ್ಯವಸಾಯ ಗುಣಲಕ್ಷಣಗಳು ಕುಮಾರರಾಮನ ಚರಿತ್ರೆ ಸಾಮಾಜಿಕ ಸಂಪ್ರದಾಯಗಳು, ಶಿವಕೋಟ್ಯಾಚಾರ್ಯರ ವಡ್ಡಾರಾಧನೆಯ ಕಥೆಗಳು, ದುರ್ಗಸಿಂಹರ ಪಂಚತಂತ್ರಕಥೆಗಳೆಲ್ಲವುಗಳು ಮಾನವನನ್ನು ಸುಂಸ್ಕೃತನನ್ನಾಗಿಸುತ್ತವೆ ಎನ್ನುವ ನಂಬಿಕೆಯಿದೆ. ಬೌದ್ಧರು ಬರವಣಿಗೆಯನ್ನು ದೈವೀನೆಲೆಗಳನ್ನಾಗಿಸಿಕೊಂಡಿದ್ದಾರೆ. ಬರಹಕ್ಕೆ ಮಾಂತ್ರಿಕ ಶಕ್ತಿ ಇದೆ ಎಂಬ ನಂಬಿಕೆಯನ್ನು ತೋರಿಸಿಕೊಟ್ಟಿದ್ದಾರೆ. ಕಾಡುಜನರು ಬರಹವನ್ನು ಕಂಡು ಹೆದರುತ್ತಾರೆ. ಬರೆದ ತಾಳೆಗರಿಗಳನ್ನು ಕೊಂಡೊಯ್ಯಲು ಅಂಜುತ್ತಾರೆ. ಅದು ದಾರಿಯಲ್ಲಿ ತನ್ನೊಡನೆ ಮಾತಾಡೀತು ಎಂದು ಹೆದರುತ್ತಾರೆ. ಕಾಯಿಲೆಯಾದಂತಹ ಸಂದರ್ಭದಲ್ಲಿ ತಾಳೆಗರಿಯಲ್ಲಿ ಶ್ಲೋಕಗಳನ್ನು ಬರೆದು ತಾಮ್ರದ ಸುರುಳಿಯಿಂದ ಕಟ್ಟಿಕೊಂಡರೆ ಯಾವುದೇ ಭಯ ನಮ್ಮತ್ತ ಸುಳಿಯಾಲಾರದೆಂಬ ನಂಬಿಕೆ ಇದೆ. ಅಧ್ಯಾಯ ಐದರಲ್ಲಿ ಸಮರೋಪವಿದೆ. ಕನ್ನಡ ಹಸ್ತಪ್ರತಿ ಸಂಪತ್ತು ಕನ್ನಡ ಸಂಸ್ಕೃತಿಯಲ್ಲಿ ವಹಿಸಿದ ಪಾತ್ರವನ್ನು ಅಧ್ಯಯನಿಸುವುದು ಇಲ್ಲಿನ ಮುಖ್ಯ ಒಲವು.

### ೧.೪. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಕನ್ನಡ ಹಸ್ತಪ್ರತಿಗಳಲ್ಲಿ ದೈವೀನೆಲೆಗಳ ಕುರಿತು ಈ ವರೆಗೆ ನಡೆದ ಅಧ್ಯಯನಗಳು ಹೆಚ್ಚಾಗಿ ದಾರ್ಶನಿಕ ಹಾಗೂ ಸಾಮಾಜಿಕ ನೆಲೆಗೆ ಸಂಬಂಧಿಸಿದ ಮಾಹಿತಿಯನ್ನು ಉಲ್ಲೇಖಿಸುತ್ತವೆ. ಪ್ರೊ.ಎಂ.ವಿ.ಸೀತಾರಾಮಯ್ಯ, ಡಾ.ಆರ್.ಶೇಷಶಾಸ್ತ್ರಿಯವರ ಸಂಪಾದಿಸಿರುವ 'ಮಣಿಹ' ಕೃತಿಯಲ್ಲಿ ಸರಸ್ವತೀ ಪೂಜೆ ಎಂಬ ಲೇಖನದಲ್ಲಿ ಕುವೆಂಪುರವರು ತಾಳೆಗರಿಗಳನ್ನು ನವರಾತ್ರಿ, ದೀಪಾವಳಿ ದಿನಗಳಲ್ಲಿ ವಿಶೇಷವಾಗಿ ಒಂಭತ್ತು ದಿನಗಳವರೆಗೆ ರಾತ್ರಿ ಜಾಗರಣೆ ರೀತಿಯಲ್ಲಿ ದೀಪನಂದದ ರೀತಿಯಲ್ಲಿಟ್ಟು ಪೂಜಿಸುತ್ತಿದ್ದರು ಎಂದು ಹೇಳುತ್ತಾರೆ. ಮಕ್ಕಗಳೊಂದಿಗೆ ರಾತ್ರಿಯಲ್ಲಿಯೂ ಕಥೆಗಳು, ಶಿವಪುರಾಣಗಳು ಸಣ್ಣ ಭಾಗಗಳಾಗಿ ವಿಂಗಡಿಸಿ ಹೇಳುತ್ತಾರೆ. ವರ್ಷಾಂತರದಲ್ಲಿಯೂ ಒಂದೆರಡು

ಸಲ ಇಂತಹ ಪೂಜಾವಿಧಾನಗಳೊಂದಿಗೆ ಹೊರಬೆಳಕನ್ನು ತಾಳೆಗರಿಗಳು ಕಾಣುತ್ತವೆ. ಈ ಪೂಜಾವಿಧಾನಗಳಿಂದ ಮಕ್ಕಳು ಆಸಕ್ತಿಯೊಂದಿಗೆ ಧಾರ್ಮಿಕ ನೀತಿ ನಿಯಮಗಳನ್ನು ಅನುಸರಿಸುವಂತೆ ಒಂದು ಶಿಸ್ತು ಬದ್ಧವಾದ ಚೌಕಟ್ಟನ್ನು ತಿಳಿಸಿಕೊಡುತ್ತವೆ. ವ್ಯಕ್ತಿಯನ್ನು ಸುಸಂಸ್ಕೃತರನ್ನಾಗಿಸುತ್ತವೆ. ಆತ್ಮಸ್ಥೈರ್ಯ ಘನತೆಗಳೆಲ್ಲವುಗಳನ್ನು ನೀಡುತ್ತವೆ ಎಂದು ಹೇಳುತ್ತಾರೆ.

ಡಾ.ಬಿ.ಕೆ.ಹಿರೇಮಠರವರ ಮಹಾಪ್ರಬಂಧವು ಪ್ರತಿಯೊಬ್ಬ ಸಂಶೋಧಕರಿಗೂ ದಾರಿದೀಪವಾಗಿದೆ. ಕನ್ನಡ ಹಸ್ತಪ್ರತಿಗಳು ಬೇಡಿದವರಿಗೆ ಅಭಯ ಹಸ್ತವನ್ನು ನೀಡುತ್ತದೆ. ಹಸ್ತಪ್ರತಿಗಳಲ್ಲಿ ಏನಿದೆ? ಎನ್ನವುದಕ್ಕಿಂತ ಏನಿಲ್ಲ? ಎಂಬುದನ್ನು ಚರ್ಚಿಸಿದ್ದಾರೆ. ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು ಎನ್ನುವ ಪುಸ್ತಕದಲ್ಲಿ ಹಸ್ತಪ್ರತಿಗಳನ್ನು ಬಹುಶಿಸ್ತೀಯ ನೆಲೆಯಲ್ಲಿ ಮೊದಲಬಾರಿಗೆ ಡಾ.ವೀರೇಶ ಬಡಿಗೇರ ಅವರು ವಿಶ್ಲೇಷಣೆ ಮಾಡುತ್ತಾರೆ. ಬರವಣಿಗೆ ಹಾಗೂ ಧಾರ್ಮಿಕ ಸಂಪ್ರದಾಯಗಳಿಗೆ ಪರಸ್ಪರ ಸಂಬಂಧವಿರದಿದ್ದರೂ ಅವರು ಹೇಗೆ ಚತುರ್ವಿದ ಪುರುಷಾರ್ಥಗಳೊಂದಿಗೆ ಕರ್ಮಸಿದ್ಧಾಂತಗಳೊಂದಿಗೆ ಹೇಗೆ ಥಳುಕು ಹಾಕಿಕೊಂಡಿವೆ ಎನ್ನುವುದನ್ನು ವೈಚಾರಿಕವಾಗಿ ವ್ಯಾಖ್ಯಾನಿಸಿದ್ದಾರೆ. ಮನುಷ್ಯನ ಲೌಕಿಕ ಬದುಕಿಗೆ ಆಗಿದೆಯಾದಂತೆ ಪರಮಾರ್ಥಿಕ ಬದುಕಿಗೂ ಹಸ್ತಪ್ರತಿಗಳು ಕಾರಣವಾದ ಸಂಗತಿಗಳನ್ನು ಉದಾಹರಣೆ ಸಹಿತ ವಿವರಿಸುತ್ತಾರೆ.

ಹಸ್ತಪ್ರತಿಗಳ ಸಂರಕ್ಷಣೆ ಕುರಿತು ಹೇಳುತ್ತ ಡಾ.ಎಚ್.ದೇವೀರಪ್ಪ, ಡಾ.ಬಿ.ಎಸ್.ಸಣ್ಣಯ್ಯ ಮುಂತಾದ ವಿದ್ವಾಂಸರು ಜಗಲಿ ಮೇಲಿಟ್ಟು ನೀರು ಹೂ, ಪತ್ರೆ ಬತ್ತಿ ಹಚ್ಚುವ ಮೂಲಕ ಮೂಢನಂಬಿಕೆಯಿಂದ ಮಹತ್ವದ ಹಸ್ತಪ್ರತಿಗಳು ನಾಶವಾದ ಬಗ್ಗೆ ಬರೆಯುತ್ತಾರೆ. ಅಂದರೆ ದೈವೀನಂಬಿಕೆ ಎನ್ನುವುದು ಹಸ್ತಪ್ರತಿಗಳಂಥ ಜ್ಞಾನ ಸಾಮಗ್ರಿಗಳನ್ನು ಸಂರಕ್ಷಿಸಲು ಸಂವರ್ಧಿಸಲು ಕಾರಣವಾದಂತೆ ಅದರ ನಾಶಕ್ಕೂ ಹೇಗೆ ಕಾರಣವಾಗುತ್ತವೆ ಎನ್ನುವ ಬಹುಮುಖ್ಯ ಸಂಗತಿಗಳನ್ನು ಇಂಥ ಅನೇಕ ಹಿರಿಯರು ಪ್ರಾಸಂಗಿಕವಾಗಿ ತಮ್ಮ ಬರಹಗಳಲ್ಲಿ ಪ್ರಸ್ತಾಪಿಸಿರುವುದನ್ನು ಕಾಣುತ್ತೇವೆ.

ಧಾರ್ಮಿಕ ಆಚರಣೆಗಳಲ್ಲಿ 'ದೈವಾರಾಧನೆ'ಯು ಒಂದಾಗಿದೆ. ದೇವರು, ಧರ್ಮ, ಭಕ್ತಿ, ನಂಬಿಕೆ, ಸಂಪ್ರದಾಯ ಆಚರಣೆಗಳು ಸಂಸ್ಕೃತಿಯ ಪ್ರಧಾನ ಅಂಶಗಳಾಗಿವೆ. ಭಯವೆಂಬುದು ನಮ್ಮನ್ನು ಆವರಿಸಿಕೊಂಡಿದೆ. ಇದರಿಂದ ಮುಕ್ತರಾಗಲು ಪ್ರಕೃತಿ, ನಿಸರ್ಗ ಪೂಜೆಗಳನ್ನು ಆಚರಿಸಲು ಮುಂದಾದರು. ಇಂದು ಮೂರ್ತಿರೂಪದಿಂದ ಮುಂದುವರಿದಿದೆ. ಈ ಎಲ್ಲ ಆಚರಣೆಗಳಿಂದಲೇ ಅಕ್ಷರ ಸರಸ್ವತಿ ಪ್ರತಿಯೊಬ್ಬರ ನಾಲಿಗೆಯ ಮೇಲೆ ನಲಿದಾಡುತ್ತಾಳೆ. ಎಲ್ಲರೊಂದಿಗೆ ಬೆರೆತು ಉನ್ನತ ನಾಗರೀಕರನ್ನಾಗಿಸುತ್ತದೆ. ತನ್ನದೇ ನೀತಿ ಮಾರ್ಗಗಳನ್ನು ಅನುಸರಿಸುವಂತೆ ಸಮಾಜದಲ್ಲಿ ಒಬ್ಬ ಶ್ರೇಷ್ಠ, ಗೌರವ ಸ್ಥಾನಗಳಲ್ಲಿ ನಿಲ್ಲುತ್ತದೆ.

□□□

ಅಧ್ಯಾಯ ಎರಡು

# ಭಾರತೀಯ ಆರ್ಷೇಯ ಚಿಂತನೆಗಳು ಹಾಗೂ ವಿದ್ಯೆ

೨.೧. ದೇವರ ಕಲ್ಪನೆಗಳು

೨.೨. ಪ್ರಕೃತಿ ಆರಾಧನೆಗಳು

೨.೩. ಮೂರ್ತಿ ಪೂಜೆ

ಎರಡು

# ಭಾರತೀಯ ಆರ್ಷೇಯ ಚಿಂತನೆಗಳು ಹಾಗೂ ವಿದ್ಯೆ

ದೇವರು ಎಂದ ಕೂಡಲೆ ಕಣ್ಮುಂದೆ ಬರುವುದು ಅದರ ಆಲೌಕಿಕ ಹಾಗೂ ಅವೈದಿಕ ಕಲ್ಪನೆಗಳು. ಧರ್ಮ ಎಂದ ಕೂಡಲೇ ಕಣ್ಮುಂದೆ ಬರುವುದು ಲಿಖಿತ ಚಾರಿತ್ರಿಕ ಹಿನ್ನೆಲೆಯುಳ್ಳ ಉಚ್ಚ ವರ್ಗಗಳು. ಧರ್ಮ ಹಾಗೂ ದೇವರ ಕುರಿತು ಹೆಚ್ಚಿನ ಗ್ರಂಥಗಳು ರೂಢಿಗತ ಹಾಗೂ ಉಚ್ಚ ಮತಧರ್ಮಗಳ ಮಾಹಿತಿಗಳಿಂದಲೇ ತುಂಬಿಹೋಗಿವೆ. ಇವು ಅವೈದಿಕ ನೆಲೆಯ ಆ ನಾಡಿನ ಬಹು ಸಂಖ್ಯಾತ ಸಮುದಾಯಗಳ ಧಾರ್ಮಿಕ ಶ್ರದ್ಧೆ ಹಾಗೂ ಆಚರಣೆಗಳನ್ನು ಪರಿಗಣಿಸುವುದಿಲ್ಲ. ಗತಕಾಲಕ್ಕೆ ಸರಿದು ಹೋದ ಧರ್ಮಗಳ ಚರಿತ್ರೆಗೆ ನೀಡಿದ ಗಮನವನ್ನು ಜೀವಂತ ಪರಂಪರೆಗೆ ನೀಡುವುದಿಲ್ಲ. ಧಾರ್ಮಿಕ ನಂಬಿಕೆಗಳು ಅಂತರ್ಯದ ತೃಪ್ತಿಗಾಗಿ ಹುಟ್ಟಿಕೊಂಡಂತವು. ಅವು ಸ್ವಯಂ ಪೂರ್ಣವೂ ಇಂದ್ರಿಯಾತೀತವೂ ಆದಂತಹ ಸ್ಥಾನವನ್ನು ಹೊಂದಿದಂತವು. ಇವುಗಳನ್ನು ಬರೆಯಬೇಕಾದರೆ ಮಾನಸಿಕ ಹಾಗೂ ನೈತಿಕವಾದ ಸೂಕ್ಷ್ಮ ಸಿದ್ಧತೆಗಳನ್ನು ಸೂಕ್ಷ್ಮ ಸಿದ್ಧತೆಗಳುಳ್ಳ ಉನ್ನತ ಪ್ರಜ್ಞೆಯೊಂದು ಇರಬೇಕೆನ್ನುವುದನ್ನು ಆರ್ಷೇಯ ಚಿಂತನೆಗಳು ಹೇಳುತ್ತವೆ.

ಇಂತಹ ಧಾರ್ಮಿಕ ಸತ್ಯಗಳು ಪ್ರತೀಕ ಶ್ರದ್ಧೆಯಿಂದ ಕೂಡಿದ್ದು, ಅವು ಒಂದು ಸಲ ಸಾಬೀತಾದ ಮೇಲೆ ಪ್ರಶ್ನಾತೀತ ಭಾಷೆಯನ್ನು ಬಯಸುತ್ತಿವೆ. ಹೀಗೆ ಧರ್ಮ ಹಾಗೂ ದೇವರು ಎಂಬ ಕಲ್ಪನೆಗಳು ಪ್ರಶ್ನಾತೀತವಾದ ಪವಿತ್ರಲೋಕ ಎಂಬುದರ ಜೊತೆಗೆ ಅದೊಂದು ಅಫೀಮು ಅದನ್ನೊಂದು ತಟಸ್ಥ ಗ್ರಹಿಕೆಯೊಂದನ್ನಾಗಿ ನೋಡುವ ಸಂದರ್ಭಗಳು ಚಾಲ್ತಿಯಲ್ಲಿವೆ.

ಧರ್ಮಗಳನ್ನು ಅದು ಪೋಷಿಸಿಕೊಂಡು ಬಂದ ಆರ್ಷೇಯ ನೆಲೆಗಳನ್ನು ಒಂದು ಭಾವನಾತ್ಮಕ ಹಾಗೂ ನಿತ್ಯ ಜೀವನಕ್ಕೆ ಸಂಬಂಧವಿಲ್ಲದ ವಿದ್ಯಮಾನವೆಂಬಂತೆ ಪ್ರತಿಪಾದಿಸುತ್ತಾ ಬರಲಾಗಿದೆ. ಆದರೆ ಹಸ್ತಪ್ರತಿಗಳಂತಹ ಬರವಣಿಗೆಯ ಸಾಮಗ್ರಿಗಳು, ಪ್ರಾಕೃತಿಕ ಸಂಗತಿಗಳು ಅವ್ಯಾಹತವಾಗಿ ಆರಾಧನೆಯ ಹಾಗೂ ಆಚರಣೆಗಳ ಭಾಗವಾಗಿ ಬೆಳೆದು ಬಂದಿರುವುದು ಗಮನಾರ್ಹ ಸಂಗತಿ.

ಚಲನಶೀಲ ಸ್ವರೂಪ ಮತ್ತು ಚಲನಶೀಲ ಸ್ವರೂಪದ ಪ್ರಕೃತಿ ಹಾಗೂ ಮಾನವ ನಿರ್ಮಿತ ಬರವಣಿಗೆ ಎರಡು ಆರ್ಷೇಯ ನೆಲೆಗಳಲ್ಲಿ ತಟಸ್ಥ ಸಂಗತಿಗಳಲ್ಲಿ ನೆಲೆ ಪಡೆದಿವೆ.

ಧರ್ಮ ಹಾಗೂ ದೈವ ಎನ್ನುವುದು ಅಲೌಕಿಕ ಗ್ರಹಿಕೆಗೆ ಸನಾತನವಾಗಿಯೂ ಸರ್ವಸ್ವವನ್ನು ನಿಯಂತ್ರಿಸುವ ಸ್ವಯಂಭೂ ಶಕ್ತಿಯಾಗಿಯೂ ಕಂಡರೆ, ಲೌಕಿಕ ಗ್ರಹಿಕೆಗೆ ಚಾರಿತ್ರಿಕವಾಗಿ ವಿಕಾಸಪಥದ ಮನೋರತ್ನವಾಗಿ ಕಾಣುತ್ತದೆ. ಆದರೆ ಆಧುನಿಕ ಯುಗದಲ್ಲಿ ಧರ್ಮ ಎನ್ನುವುದು ಈ ಎರಡೂ ಆಧಾರಗಳಿಗೆ ಎರವಾಗಿ ತನ್ನ ಸಾಂಸ್ಥಿಕತೆ ಮತ್ತು ಶೋಷಣೆಯ ಶಾಸನ ಬದ್ಧತೆಗಳಿಂದಾಗಿ ರಾಜಕಾರಣಕ್ಕೆ ಸಮಾನಾಂತರವಾದ ಧರ್ಮಕಾರಣವಾಗಿ ನಿಂತಿದೆ. ಇದರಿಂದ ಅದು ತನ್ನ ಚಲನಶೀಲತೆಯನ್ನು ಕಳೆದುಕೊಂಡು ಇದು ಸಾಧ್ಯ ಎನ್ನುವ ಸಹ್ಯ ನೆಲೆಗಿಂತ ಇದು ಮಿಥ್ಥಂ ಎನ್ನುವ ಅಸಹ್ಯ ನೆಲೆಗೆ ಬಂದು ತಲುಪಿದೆ. ಹೀಗೆ ಧರ್ಮವೆಂಬುದು ತನ್ನ ಸಹಜತೆಯನ್ನು ಕಳೆದುಕೊಂಡು ಕರ್ಮಠವಾದಾಗ ಅದು ಶೋಷಣೆಯ ಮೂಲವಾಗಬಹುದು. ಯಾವುದು ಇನ್ನೊಂದನ್ನು ಎತ್ತಿ ಹಿಡಿಯುವುದೋ ಅಥವಾ ಇನ್ನೊಂದಕ್ಕೆ ಆಧಾರವಾಗಿ ಅದನ್ನು ರಕ್ಷಿಸುವುದೋ ಅದು ಧರ್ಮ ಎಂದೆನಿಸಿಕೊಳ್ಳುತ್ತದೆ. ಇಂಥ ಧರ್ಮವೆನ್ನುವುದು ತನ್ನ ವಿಶಾಲಾರ್ಥವನ್ನು ಕಳೆದುಕೊಂಡು ತೀರ ಸಂಕುಚಿತ ಅರ್ಥದಲ್ಲಿ ಬಳಕೆಯಾಗುತ್ತಿದೆ. ಇಂದು ಮತಧರ್ಮಗಳೆಂದರೆ ದೇವರು, ಮನುಷ್ಯ, ವಿಧಿ ಮತ್ತು ಅವನ ಆತ್ಮಸಂಬಂಧ ಹಾಗೂ ಅವನ ಧರ್ಮಾಚರಣೆಗಳು ಎಂಬುದಾಗಿ ಅರ್ಥೈಸಲಾಗಿದೆ. ಇಂಥ ಸಿದ್ಧಾಂತಗಳ ವಿಸ್ತೃತ ಪ್ರತಿಪಾದನೆಗೆ ದೇವತಾ ಶಾಸ್ತ್ರವೂ ಹುಟ್ಟಿಕೊಂಡಿದೆ. ದೇವತಾಶಾಸ್ತ್ರವು ಇದಕ್ಕೆ ಸಂಬಂಧಪಟ್ಟ ಮತಧರ್ಮದ ಶಾಸ್ತ್ರರೂಪವಾಗಿದೆ ಎನ್ನಬಹುದು.[೧]

ಧರ್ಮ ಎಂಬುದು ಅಧ್ಯಾತ್ಮಿಕ ಹಾಗೂ ಮಾನಸಿಕ ನೆಲೆಗಿಂತ ಪ್ರಭುತ್ವ ಮತ್ತು ಅದರ ಚಾರಿತ್ರಿಕ ನೆಲೆಗೆ ಸಂಬಂಧಿಸಿದ್ದು ಎನ್ನುವ ವಾದಗಳೇ ನಡೆಯುತ್ತಿವೆ. ಇದು ಪ್ರಭುತ್ವ, ದೇವರು, ಧರ್ಮ, ಮನುಷ್ಯ ಜಗತ್ತು ಇತ್ಯಾದಿಗಳ ಬಗ್ಗೆ ಚರ್ಚೆ ಸಾಧ್ಯವಿಲ್ಲ ಎಂದು ಹೇಳುತ್ತದೆ. ಇವೆಲ್ಲವುಗಳನ್ನು ಮೀರಿ ನಡೆದರೆ ದಂಡನೆ, ಧರ್ಮದ ಬಗ್ಗೆ ಮಾತನಾಡಿದರೆ ಅದು ಪ್ರಭುತ್ವ ವ್ಯವಸ್ಥೆಯಂತೆ ದೊಡ್ಡ ಪಡಂಭೂತವಾಗಿ ನಿಂತುಬಿಟ್ಟಿದೆ. ಇದರಿಂದ ಧರ್ಮವನ್ನು ಬೆಳೆಸಿಕೊಳ್ಳದರ ಮೂಲಕ ತನ್ನ ಅಧಿಕಾರವನ್ನು ಕಾಪಾಡಿಕೊಳ್ಳುವ ವ್ಯವಸ್ಥೆ ವೈಚಾರಿಕ ಚರ್ಚೆಗೆ ಅನುವುಮಾಡಿಕೊಳ್ಳುವುದೇ ಇಲ್ಲ. ಆದ್ದರಿಂದ ಧರ್ಮ ಎಂಬುದು ಆಶ್ರಯವಿಲ್ಲದೆ ಅರಾಜಕತೆಯನ್ನು ಕಂಡುಕೊಳ್ಳಲಿದೆ. ಇಲ್ಲಿ ಪ್ರಭುತ್ವವಾದಿಗಳು ತಮಗಿಷ್ಟವಾದ ರೀತಿಯಲ್ಲಿ ಧರ್ಮವನ್ನು ಅನುಸರಿಸಲಿ ಎಂದುಕೊಂಡು ಜನರನ್ನು ತಮ್ಮವರನ್ನಾಗಿಸಿಕೊಳ್ಳುತ್ತಿದ್ದಾರೆ. ಇದರಿಂದ ಸಾಂಸ್ಥಿಕ ಧರ್ಮ ಬೇರೂರಿ ಧರ್ಮ ಎಂಬುದು ಇದ್ದು ಇಲ್ಲದಂತಾಗುವ ಪರಿಸ್ಥಿತಿಯನ್ನು ಮುಂದೆ ಕಾದು ನೋಡಬಹುದಾಗಿದೆ. ಈ ಸಾಂಸ್ಥಿಕ ಧರ್ಮವೆಂಬುದು ರಾಜಕೀಯ ಮೂಲವಾಗಿದೆ. ಇಲ್ಲಿ ಆಳುವವರೇ ಪ್ರಭುಗಳಾಗಿ ಎಲ್ಲರೂ ಇವರ ಸೀಮಿತಕ್ಕೊಳಪಡುತ್ತಾರೆ. ಇಂತಹವರಲ್ಲಿ ದೇವರು ಭಕ್ತಿಯಂತಹ ನಂಬಿಕೆಗಳು ತಾನಾಗಿ ಜನಮಾನಸದಲ್ಲಿರುವುದು ಧರ್ಮ ಸಂಸ್ಥೆಗಳಿಗೆ ಪ್ರಯೋಜನವಾಗುವುದಿಲ್ಲ. ಹೀಗಾಗಿ ಮಧ್ಯವರ್ತಿಗಳ ಸಹಾಯದಿಂದ ಅವರನ್ನು ಬಂಧಿಸುತ್ತಿದ್ದಾರೆ.

ಭಾರತದಲ್ಲಿ ಹಲವಾರು ಮತ ಧರ್ಮಗಳು ಬೇರೂರಿವೆ. ಎಲ್ಲ ಧರ್ಮಗಳನ್ನು ಅನುಸರಿಸಿಕೊಂಡು ಅವರ ದಾರ್ಮಿಕತೆಗೆ ತಕ್ಕಂತೆ ನಿಯಮಾನುಸಾರವಾಗಿ ರೂಢಿ ನಿಯಮಗಳನ್ನು ಅನುಸರಿಸುವುದು, ಆಯಾ ಧರ್ಮಗಳಲ್ಲಿ ಕಾಣಬಹುದಾಗಿದೆ. ಹಿಂದೂ ಧರ್ಮದಲ್ಲಿ ಅಪಾರ ನಂಬಿಕೆ. ಇದಕ್ಕೆ ಸುಮಾರು ೨೫ ಸಾವಿರ ವರ್ಷಗಳ ಇತಿಹಾಸವಿದೆ ಎಂದು ಹಲವು ಚಿಂತಕರು ಸ್ಪಷ್ಟಪಡಿಸಿದ್ದಾರೆ. ಇದರ ವೈಶಿಷ್ಟ್ಯವೆಂದರೆ ಈ ಧರ್ಮಕ್ಕೆ ಸ್ಥಾಪಕರೇ ಇಲ್ಲ ಎಂದು ಪರಿಗಣಿಸಿದ್ದಾರೆ. ಈ ಧರ್ಮದಲ್ಲಿ ಕರ್ಮಸಿದ್ಧಾಂತಕ್ಕೆ ಪುನರ್ಜನ್ಮವಿದೆ ಎಂಬುದು ಧರ್ಮಬಾಹೀರವಾಗಿದೆ. ಹುಟ್ಟಿದವರು ಸಾಯಲೇಬೇಕು. ಸತ್ತವರು ಮತ್ತೊಂದು ಜೀವಿಯಲ್ಲಿಯಾದರೂ ಎಂಬತ್ತು ನಾಲ್ಕು ಕೋಟಿ ಜೀವರಾಶಿಗಳಲ್ಲಿ ಒಂದಾಗಿ ಹುಟ್ಟಲೇ ಬೇಕೆಂಬುದೇ ಇದರ ವಿಶೇಷವಾಗಿದೆ. ಆದರೆ ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮಗಳು ಒಪ್ಪುವುದು ಒಂದೇ ಜನ್ಮವನ್ನು ಬಹುಜನ್ಮಗಳು ಇಲ್ಲ ಎಂಬುದಾಗಿ ಹೇಳುತ್ತವೆ. ಮತ್ತೊಂದೆಡೆ ಹಿಂದೂ ಧರ್ಮ ಹೀಗೆ ಸಾರುತ್ತದೆ. ಈ ಭೂಮಿಯಲ್ಲಿರುವ ಮನುಷ್ಯನಿಗೆ ಮಾತ್ರವಲ್ಲ, ಪ್ರತಿಯೊಂದು ಜೀವಿಗೆ ಆತ್ಮವಿದೆ ಎಂದು ಹೇಳುತ್ತದೆ. ಆದರೆ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಈ ವಾದವನ್ನು ಒಪ್ಪವುದಿಲ್ಲ. ಈ ಎಲ್ಲ ವಾದವಿವಾದಗಳಿಂದಲೇ ನಮ್ಮ ದೇಶ ಹಲವು ಮತಗಳ 'ತೌರೂರಾಗಿದೆ' ಎಂದು ಹೇಳಬಹುದು.

ಧರ್ಮ ಒಂದು ವ್ಯವಸ್ಥೆಯ ಸಂಕೇತ. ಇಂತಹ ಧರ್ಮವನ್ನು ನಾವು ಹೇಗೆ ಅಳವಡಿಸಿಕೊಳ್ಳುತ್ತೇವೆಯೋ ಹಾಗೆ ಅದು ನಮ್ಮನ್ನು ಅಳವಡಿಸಿಕೊಳ್ಳುತ್ತದೆ. ಈ ಧರ್ಮವನ್ನು ಸೃಷ್ಟಿಸಿದ್ದು ಮಾನವರೇ ವಿನಹ ಬೇರಾರು ಅಲ್ಲ. ನಾವು ನಮಗೆ ಅನುಕೂಲಕ್ಕೆ ತಕ್ಕಂತೆ, ಆಯಾ ಧರ್ಮಗಳನ್ನು ಪಾಲನೆ ಪೋಷಣೆ ಮಾಡುತ್ತೇವೆ ಎಂದರೆ ನಾವು ಹೇಳಿದಂತೆ ಧರ್ಮ ಕೇಳಬೇಕು ವಿನಹ, ಧರ್ಮ ಹೇಳಿದಂತೆ ನಾವು ಕೇಳಬಾರದು.

ಸಿಂಧೂ ನಾಗರಿಕತೆಯ ಕಾಲದಿಂದಲೂ ದೈವಾರಾಧನೆ, ಪ್ರಕೃತಿ ಆರಾಧನೆ, ಪ್ರಾಣಿ ಪಕ್ಷಿ ಆರಾಧನೆ, ಮತ್ತು ಮೂರ್ತಿಪೂಜೆ, ಆರಾಧನೆಗಳು ಜಾರಿಯಲ್ಲಿ ಬಂದುವು. ಹರಪ್ಪ ಮತ್ತು ಮೊಹೆಂಜೋದಾರೋಗಳಲ್ಲಿ ಸ್ಮಾರಕಗಳಾಗಿ ಉಳಿದಿರುವ ಕೆಲವು ಕಟ್ಟಡಗಳನ್ನು ದೇವಸ್ಥಾನಗಳೆಂದು ಗುರುತಿಸಲಾಗಿದೆ. ಈ ಬಗ್ಗೆ ಮಾಹಿತಿ ದೊರೆತಿರುವುದು ಆಗಿನ ಕಾಲದ ಜೇಡಿಮಣ್ಣಿನ ಸಣ್ಣ ಪ್ರತಿಮೆಗಳು ಹಾಗೂ ಮೊಹರುಗಳ ಮೇಲಿರುವ ಚಿತ್ರಗಳಿಂದ, ಹರಪ್ಪ ಪ್ರದೇಶದಲ್ಲಿ ತುಂಬ ಒಡವೆಗಳನ್ನು ಧರಿಸಿರುವ ಜೇಡಿಮಣ್ಣಿನ ಹೆಣ್ಣು ಪ್ರತಿಮೆಗಳು ಸಾಕಷ್ಟು ದೊರೆತಿವೆ. ಪ್ರಾಚೀನ ಕಾಲದಿಂದಲೂ ಪಶ್ಚಿಮ ಏಷ್ಯಾದಲ್ಲಿ ಪೂಜಿಸುತ್ತಾ ಬಂದಿರುವ ಆದಿಶಕ್ತಿಯೊಂದಿಗೆ ಹೋಲಿಸಲಾಗಿದೆ. ಈ ಧಾರ್ಮಿಕ ಹಿನ್ನೆಲೆಯು ಆಚರಣೆಗಳ ಬಗ್ಗೆ ತಿಳಿಸಿಕೊಡುತ್ತದೆ. 'ಒಂದು ಪ್ರಖ್ಯಾತ ಮೊಹರಿನ ಮೇಲೆ ಕೊಂಬುಗಳಿರುವ ದೇವತೆಯೊಂದು ಯೋಗ ಬಂಗಿಯಲ್ಲಿ ಕುಳಿತಿದ್ದು ಅದರ ಸುತ್ತ ಅನೇಕ ಸಂಖ್ಯೆಯಲ್ಲಿ ಪ್ರಾಣಿಗಳಿದ್ದು ಅದನ್ನು ಸರ್. ಜಾನ್. ಮಾರ್ಷಲ್ ಅವರು 'ಪಶುಪತಿ' ದೇವರು ಎಂದು ೧೯೨೧ರಲ್ಲಿ 'ಹರಪ್ಪ'ದಲ್ಲಿ ಗುರುತಿಸಿದ್ದಾರೆ. ಅದರಂತೆ, ಆರ್.ಸಿ.ಮುಂಜುಮ್‌ದಾರ್ ೧೯೨೨ರಲ್ಲಿ 'ಮೊಹೋಂಜೋದಾರೊ'ದಲ್ಲಿ ಮತ್ತು ಎಸ್.ಆರ್.ರಾವ್, 'ಲೋಥಲ್'ನಲ್ಲಿ ೧೯೨೨ರಲ್ಲಿ ಹಡಗು

ಕಟ್ಟೆಯ ಅವಶೇಷಗಳನ್ನು ಪತ್ತೆ ಹಚ್ಚಿದ್ದಾರೆ. ಮತ್ತೊಂದು ಮೊಹರಿನ ಮೇಲೆ ಒಬ್ಬ ಯೋಗಿ ಹಾಗೂ ಹೆಡೆಬಿಚ್ಚಿದ ನಾಗರ ಹಾವಿನ ಚಿತ್ರವಿದೆ. ಇನ್ನೂ ಅನೇಕ ಮೊಹರುಗಳ ಮೇಲೆ ಆಲ ಅಥವಾ ಇತರ ವೃಕ್ಷದೊಡನೆ ವೃಕ್ಷದೇವತೆಯನ್ನು ಚಿತ್ರಿಸಲಾಗಿದೆ. ಕೆಲವೊಮ್ಮೆ ಕಲ್ಲು ಪೂಜಿಸುವವರನ್ನು ಚಿತ್ರಿಸಿದ್ದಾರೆ'.[೩] ಕೆಲವೊಂದು ಮೇಲೆ ಸಂಯುಕ್ತ ಪ್ರಾಣಿ ಚಿತ್ರಗಳನ್ನು ತೋರಿಸಲಾಗಿದೆ. ಉದಾಹರಣೆಗೆ ಏಕಶೃಂಗಿ, ಆನೆ, ಮನುಷ್ಯ ಮತ್ತು ಸಿಂಹ ಅವು ಒಂದು ಪಂಥದ ಚಿತ್ರಗಳಾಗಿರುವ ಸಾಧ್ಯತೆ ಇದೆ. ಅಲ್ಲದೆ ಆಲದ ಎಲೆ ಅಥವಾ ಸ್ವಸ್ತಿಕ್ ಚಿತ್ರಗಳು ಹರಪ್ಪನ್ನರಿಗೆ ಧಾರ್ಮಿಕವಾಗಿ ಪ್ರಮುಖವಾಗಿದ್ದವು. ಇವರ ಕಾಲದಲ್ಲಿ ನೀರಿಗೆ ಬಹು ಪ್ರಾಮುಖ್ಯತೆ ಇದೆ ಎಂಬುದಕ್ಕೆ ಮೊಹೊಂಜೋದಾರೋದ ಬೃಹತ್ ಸ್ನಾನಗೃಹವೇ ಸಾಕ್ಷಿಯಾಗಿದೆ.

ಈ ಎಲ್ಲ ಅಂಶಗಳನ್ನು ನೋಡಿದರೆ ಇವರು ವಿವಿಧ ಪ್ರದೇಶಗಳ ಜನರು ಬೇರೆ ಬೇರೆ ರೀತಿಯ ಧಾರ್ಮಿಕಾಚರಣೆಗಳನ್ನು ಅನುಸರಿಸುತ್ತಿದ್ದರು. ಇವರ ಕಾಲದಲ್ಲಿ ವಿಗ್ರಹ ಪೂಜೆ ಹಾಗೂ ವಿಗ್ರಹ ರಹಿತ ಪೂಜೆ ಒಟ್ಟೊಟ್ಟಿಗೆ ಆಚರಣೆಯಲ್ಲಿದ್ದವು ಎಂಬುದನ್ನು ಸ್ಪಷ್ಟವಾಗಿ ಹೇಳಬಹುದಾಗಿದೆ.

**ದೇವರ ಕಲ್ಪನೆಗಳು :**

ದೇವರು ಎಂಬುದು ಒಂದು ವಸ್ತು ರೂಪಕವಾಗಿದೆ. ಕಂಡ ಕಂಡ ವಸ್ತುಗಳಿಗೂ ದೇವರೆಂದು ಕೈ ಮುಗಿಯುವ ರೂಢಿ ಪರಂಪರೆಯಿಂದಲೂ ಬಂದಿದ್ದನ್ನು ಇಂದಿಗೂ ಕಾಣುತ್ತೇವೆ. ಇಂದು ನಮ್ಮ ಮನೆಯಲ್ಲಿ ಇತರೆಡೆಗಳಲ್ಲಿ ದೇವರು ಎಂಬ ಒಂದು ಆಧಾರವೇ ಮೂಲವಾಗಿದೆ. ಕೃಷ್ಣ ನಿಂತಿದ್ದು ಕೈಯಲ್ಲಿ ಚಕ್ರ ಧರಿಸಿರುವನು, ಈಶ್ವರ ಕುಳಿತು ತಪಸ್ಸನ್ನು ಮಾಡುವುದು, ಲಕ್ಷ್ಮೀ ನಿಂತು ಕೈಯಿಂದ ಹಣ ಸುರಿಯುತ್ತಿರುವುದು, ಮತ್ತು ಸರಸ್ವತಿ ಕುಳಿತು ವೀಣೆ ನುಡಿಸುತ್ತಿರುವುದು. ಈ ಎಲ್ಲ ಸಂಕೇತಗಳೊಂದಿಗೆ ಹೊಂದಿದ ಭಾವಚಿತ್ರಗಳಿಗೆ ಮಾತ್ರ ದೇವರೆಂದು ಪೂಜಿಸುವುದು ಇಂದಿಗೂ ಕಾಣುತ್ತೇವೆ.

ಈ ವೈಚಾರಿಕ ನಾಸ್ತಿಕನ ನಿಲುಮೆಯಂತೆ ದೇವರೆಂಬುದು ಒಂದು ರೂಪಕ; ಒಂದು ಪ್ರತೀಕ; ಒಂದು ಸಂಕೇತ. ತೀರ ಭಾವನಾಮಯ ಮನಸ್ಸು ಅದನ್ನು ಒಂದು ತೇಜ: ಪುಂಜವಾದ ಶಕ್ತಿಯಾಗಿ, ದಿವ್ಯ ಭಕ್ತಿಯಾಗಿ ರೂಪಿಸಬಹುದು.[೪] ದೇವರು ಎಂದುಕೊಂಡು ಒಂದು ವಸ್ತು, ಸಂಕೇತ ಮೂಲಕ ಒಪ್ಪಿಕೊಂಡಿರಬಹುದು. ಆದರೆ ಇದೆಲ್ಲ ಆತನಿಗೆ ಎಷ್ಟರ ಮಟ್ಟಿಗೆ ನಿಜ ಮತ್ತು ಸುಳ್ಳೋ ಎಂಬುದು ತಿಳಿಯದು. ಇದನ್ನೆಲ್ಲ ಆತ ಒಂದು ಕನಸೋ ಅಥವಾ ಅದೊಂದು ದೃಷ್ಟಾಂತವೋ ಎಂದುಕೊಂಡು ಇದು ಎಷ್ಟರ ಮಟ್ಟಿಗೆ ಸತ್ಯವೆಂದು ನಂಬಿಕೊಂಡಿರುತ್ತಾನೆಯೋ ಅದು ಅವರವರಿಗೆ ಬಿಟ್ಟ ವಿಷಯ. ದೇವರು ಎಂಬ ನಂಬಿಕೆಯನ್ನು ಮಾತ್ರ ಹೊಂದಿದ್ದರು. ದೇವರೆಂದು ಕಂಡುಕೊಳ್ಳಲು ಸಾಧ್ಯ. ಇಲ್ಲವಾದರೆ ಅದು ಅಸತ್ಯ ಎಂದುಕೊಳ್ಳುತ್ತಾರೆ.

ದೇವರನ್ನ ಕುರಿತು ಹಲವು ಪ್ರಾಜ್ಞರು ಈ ರೀತಿ ಸ್ಪಷ್ಟಪಡಿಸಿದ್ದಾರೆ. ನಿಜಗುಣದ ಉಪಾಸನೆ, ನಿರಾಕಾರ ತತ್ವದ ಆರಾಧನೆ ನಮ್ಮ ಮನಸ್ಸಿಗೆ ಒಗ್ಗದು. ಅದಕ್ಕಾಗಿ ಅದರ ಪ್ರತೀಕವನ್ನು ದೇವತಾ ಮೂರ್ತಿಯನ್ನು ಓಂಕಾರ, ಸ್ವಸ್ತಿಕ, ಶ್ರೀ ಚಕ್ರ, ಲಿಂಗ, ಸಾಲಿಗ್ರಾಮ, ನರ್ಮದಾ ಬೆನಕದಂಥ ಚಿಹ್ನೆಗಳನ್ನು ಇಟ್ಟುಕೊಂಡು ಪೂಜೆ ಮಾಡುವುದು. ಅವನ್ನೇ ದೇವರೆಂದು ನಂಬುವ ಪ್ರಮೇಯವಿಲ್ಲ'.[೫]

ದೇವರು ಎಂಬುದು ಒಂದು ಮೂರ್ತರೂಪ. ಈ ಮೂರ್ತಿಯಿಂದ ನಾವು ಏನನ್ನು ಕಾಣಲು ಸಾಧ್ಯವಿಲ್ಲ. ಇದು ಮನಸ್ಸಿನ ಶಾಂತಿ ನೆಮ್ಮದಿ ದುಗಡವನ್ನು ನಿಭಾಯಿಸಬಲ್ಲದು. ದೇವರು ಹೆಸರಿನಲ್ಲಿ ನಾವು ಬುದ್ಧಿಗೆ ಶ್ರಮ ನೀಡಿ ಜಪ ತಪಗಳನ್ನು ಶ್ರದ್ಧೆವಹಿಸಿ ಆಸಕ್ತಿ, ತಾಳ್ಮೆ ಇತ್ಯಾದಿಗಳನ್ನೆಲ್ಲ ಸ್ವೀಕರಿಸಿ ಇವುಗಳಿಂದ ದೇವರನ್ನು ಕಾಣುವುದಿಲ್ಲ. ನಮ್ಮ ಶ್ರದ್ಧೆ, ಧೈರ್ಯಗಳೇ ನಮಗೆ ದೇವರ ಹೆಸರಿನಲ್ಲಿ ದಾರಿದೀಪಗಳಾಗಿ ಕಾಣುತ್ತವೆ. ಇದನ್ನೇ ದೇವರು ಎಂದು ನಂಬಿರುವುದನ್ನು ಕಾಣಬಹುದು. ದೇವರು ಎಂಬ ಮೂರ್ತಸ್ವರೂಪದಿಂದಲೇ ಅನುಗ್ರಹಕ್ಕೆ ಪಾತ್ರರಾಗಿ ದೇವರಲ್ಲಿ ಆಸಕ್ತಿಯನ್ನು ತೋರಿಸಿ ಹಬ್ಬ ಹರಿದಿನಗಳು, ಜಾತ್ರೆ ಉತ್ಸವಗಳನ್ನು ಮಾಡಿ ಎಲ್ಲರೂ ಸಂತೋಷದಿಂದ ನಗು ನಗುತ್ತಾ ಇರುವುದರೊಂದಿಗೆ ಏನೆಲ್ಲ ಹೊಸ ಹೊಸ ಅಂಶಗಳು ಒಂದೊಂದು ರೀತಿಯಲ್ಲಿ ಮೂಢನಂಬಿಕೆಗಳು, ಹರಕೆಗಳನ್ನು ಹೊತ್ತುಕೊಂಡು ಪಾಲಿಸುವುದು, ಇದರಿಂದ ಎಲ್ಲರಿಗೂ ಸುಖ ಶಾಂತಿ ಸಮೃದ್ಧಿ ನೆಲೆಸುವಂತೆ ದೇವರಿಗೆ ವಿವಿಧ ರೂಪದಲ್ಲಿ ಅನೇಕ ಸಂಸ್ಕಾರಗಳನ್ನು ಹಾಗೆ ಮುಂದುವರಿಸಿಕೊಂಡು ಬರುವುದು ನಮ್ಮ ಜನರ ಹೆಗ್ಗಳಿಕೆಯಾಗಿದೆ.

ದೇವರು ಎಲ್ಲದರಲ್ಲಿಯೂ ಇದ್ದಾನೆ. ಆತನು ವಿಶ್ವಾತ್ಮಕ ಎಂದು ತಿಳಿದುಕೊಂಡರು. ಪ್ರತಿಯೊಂದು ಜೀವ ಜೀವಿಯಲ್ಲಿ ನೆಲೆಸಿರುತ್ತಾನೆ ಎಂಬುದು ಇದೊಂದು ನಾಸ್ತಿಕವಾದವಾಗಿದೆ. ಅಷ್ಟೇ ಆಸ್ತಿಕವಾಗಿಯೂ ಇದೆ. ಆದರೆ ಸಾರ್ವತ್ರಿಕ ಎಂಬುದು ಒಂದು ಭಾವನೆಯಾಗಿ ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ. ಪ್ರತಿಯೊಬ್ಬರಲ್ಲಿಯೂ ಜೀವವಿದೆ. ಆ ಜೀವವೇ ದೇವರೆಂದು ತಿಳಿದುಕೊಂಡಿದ್ದೇವೆ. ಆದರೆ ಜೀವಿ ಎಲ್ಲಕ್ಕೂ ಎಲ್ಲದರಲ್ಲೂ ಸಮಾನ ಮನಸ್ಕನಾಗಿರಬೇಕು. ಎಲ್ಲರ ಅಭಿಪ್ರಾಯಗಳನ್ನು ತೆಗೆದುಕೊಂಡು ತನಗೆ ಬೇಕಾದವುಗಳನ್ನು ಇಟ್ಟುಕೊಂಡು ಇಲ್ಲದ್ದನ್ನು ಕಿತ್ತೊಗೆಯಬೇಕು. ಎಲ್ಲರಿಗೂ ಮಾದರಿಯಾಗಿದ್ದು ಜನಹಿತಕ್ಕಾಗಿ ಶ್ರಮಿಸುವ ಮನೋಭಾವ, ಮನೋ ಧೈರ್ಯದಿಂದ ಮುನ್ನುಗ್ಗಬೇಕು. ಅಂತಹವರಿಂದ ಒಳ್ಳೆಯ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯ ತನ್ನ ಹೃದಯದಲ್ಲಿ ತನಗೆ ತಿಳಿದಿರದ ಹಾಗೆ ತನ್ನಲ್ಲಿಯೇ ಇದ್ದಾನೆ ಎಂದುಕೊಂಡು ಎಲ್ಲರೊಂದಿಗೆ ಸಹಕಾರ ಮನೋಭಾವನೆ, ಜಾತಿ ಬೀಜವನ್ನು ಬಿತ್ತಲಾರದವರೇ ನಿಜವಾದ ನೈತಿಕತೆಯಲ್ಲಿ ನಿತ್ಯ ನಿರತಂರವಾಗಿ ಶ್ರಮಿಸುವ ಹಿತೋಪದೇಶಗಳನ್ನು ಕೇಳಿ ತಿಳಿದುಕೊಂಡು ಅದರಿಂದ ಲಾಭ ಪಡೆಯುವವರೇ ದೈವೀ ಸಂಪ್ರದಾಯವಾದಿಗಳೆಂದು ಕರೆಯಬಹುದು. ದೇವರು ಸರ್ವಸ್ವತಂತ್ರನೂ ಎಲ್ಲರಲ್ಲಿಯೂ ತಾನೇ ತಾನಾಗಿಯೇ ಇರುತ್ತಾನೆ. ಎಂಬುದಾದರೆ

'ಏಕೋ ದೇವಃ ಸರ್ವಭೂತೇಷು ಗೂಡಃ

ಸರ್ವವ್ಯಾಪೀ ಸರ್ವ ಭೂತಾಂತಾರಾತ್ಮ'[೬]

ಅಂದರೆ ದೇವರು ಒಬ್ಬನೇ, ಆತನು ಸರ್ವಜೀವಿಗಳ ಅಂತರಂಗದಲ್ಲಿಯೇ ಗುಪ್ತನಾಗಿ ಇದ್ದಾನೆ ಎಂಬುದಾಗಿ ಸದಾಶಿವಯೋಗಿಯವರು ವ್ಯಕ್ತಪಡಿಸಿದ್ದಾರೆ. 'ದೇವರು ಎಂದರೆ ಸನಾತನನು, ಸ್ವಯಂ ಭೂ (ಅಂದರೆ ತಾನೇ ತಾನಾಗಿ ಹುಟ್ಟಿದನು) ಎಲ್ಲೆಡೆಯಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ

ಇರುವವನೂ, ಆದಿ ಮಧ್ಯರಹಿತನೂ, ಸಮಸ್ತ ಜೀವರಾಶಿಗಳಿಗೂ ಒಬ್ಬನೇ ಆಗಿರುವವನೂ, ಈ ಜಗತ್ತಿನ ಸೃಷ್ಟಿ-ಸ್ಥಿತಿ ಹಾಗೂ ಲಯ ಕರ್ತನೂ, ಅಲ್ಲದೆ, ಸ್ವಯಂ ಚೈತನ್ಯ ಶಕ್ತಿಯುತನೂ, ನಿರ್ಗುಣ ನಿರಾಕಾರನೂ ಆಗಿರುವಂತಹವನೇ ಅಲ್ಲದೆ, ಆತನು ಸರ್ವದಾ ನಾಶರಹಿತನೇ ಆಗಿರುತ್ತಾನೆ ಎಂದು ಸಕಲ ವೇದೋಪನಿಷತ್‌ಗಳೂ ಸಾರಿ ಹೇಳುತ್ತವೆ".[೭]

ಈ ನಮ್ಮ ಸಂಪ್ರದಾಯಗಳೊಂದಿಗೆ ನಾವು ತೊಡಗಿದ್ದಲ್ಲದೆ ನಮ್ಮ ಮಕ್ಕಳನ್ನು ಇದೇ ಸಂಸ್ಕೃತಿಯಲ್ಲಿ ಬೆಳೆಸುವುದು ಇಂದಿಗೂ ಕಂಡಬರುತ್ತದೆ. ಇದರಿಂದಲೇ ದೇವರು ಇದ್ದಾನೆ ಎಂಬ ಶಾಸ್ತ್ರ ಪುರಾಣಗಳಲ್ಲಿಯೂ ಪ್ರಚುರಪಡಿಸಿದ್ದು ಧರ್ಮಗಳಲ್ಲಿಯೂ ಪ್ರಸ್ತಾಪಿಸಿದ್ದು. ಆಯಾ ಧರ್ಮದಂತೆ ಪಾಲನೆ ಪೋಷಣೆಗಳನ್ನು ಹೊಂದಿವೆ. ದೇವರೊಂದಿಗೆ ನಂಬಿಕೆ, ದಯೆ, ಅನುಕಂಪ, ದಾಕ್ಷಿಣ್ಯತೆಯೊಂದಿಗೆ ಮರುಳಾಗಿ ನಮ್ಮ ಮಕ್ಕಳಿಗಾಗಿ ವೇದ ಪುರಾಣಗಳೇ ಸಾಕ್ಷಿಯಾಗಿ ನೆಲೆ ನಿಂತಿವೆ. ಅವುಗಳೇ ಆಧಾರ ಸ್ತಂಬಗಳೆಂದು ಭಕ್ತಿಯಿಂದ ಪೂಜಿಸುವುದನ್ನು ಕಾಣುತ್ತೇವೆ. ಎಲ್ಲರೂ ಸೇರಿ ಊರಿಗೆ ಉಪಕಾರಿಯಾಗುವಂತಹ ಒಳ್ಳೆಯ ಕಾರ್ಯಗಳಿಗೆ ಯಾರು ಕೈ ಹಾಕುತ್ತಿಲ್ಲ. ಆದರೆ ದೇವರಿಗೆ, ಅರ್ಚನೆ, ಪೂಜೆಗಳಿವೆಯಾದರೂ ಎಲ್ಲರೂ ಸೇರಿಕೊಂಡು ನಿರ್ಣಯ ತೆಗೆದುಕೊಳ್ಳುತ್ತಾರೆ. ದೇವರ ಹೆಸರಿನಲ್ಲಿ ತಿಂದುಂಡು ತೇಗುತ್ತಾರೆ ವಿನಹ, ಬಡವರ ಬಗ್ಗೆ ಕಾಳಜಿ ತೋರಿಸದೇ ಅವರ ಸುಖ ದುಃಖಗಳಿಗೆ ತಾವೇ ಕಾರಣರೆಂದು ಅವರನ್ನು ಹಾಗೆಯೇ ಕೊರಗುವಂತೆ ಹಿನಾಯ ಸ್ಥಿತಿಯನ್ನು ಇನ್ನಷ್ಟು ಹೀನಾಯವಾಗಿ ವರ್ತಿಸುತ್ತಿದ್ದಾರೆ. ನಮ್ಮ ಧಾರ್ಮಿಕ ವರ್ಗದವರು ತಮ್ಮನ್ನು ತಾವು ತಿಳಿಯದೇ ತಮಗೆ ಸರಿ ಎನಿಸಿದ ದಾರಿಯಲ್ಲಿ ಹೋಗುತ್ತಾರೆ. ಅದೊಂದು ಮುಂದೆ ಸುಗಮವಾಗಬಹುದು. ಇಲ್ಲವಾದರೆ ಇನ್ನೊಂದು ದಿನ ತನಗೆ ತಾನೆ ಕುಸಿದು ಬೀಳುವುದರಲ್ಲಿ ಸಂಶಯವಿಲ್ಲ ಎಂದು ಹೇಳಬಹುದು.

ದೇವರ ಕಲ್ಪನೆಯ ತಳಹದಿಯನ್ನು ಮೊದಲು ಗ್ರಹಿಸಿದ ಮೊದಲ ತತ್ವಜ್ಞಾನಿ ಎಂದರೆ ಕಾರ್ಲ್‌ಮಾರ್ಕ್ಸ್ 'ದೈವಿಕ ಕಲ್ಪನೆಯನ್ನು ಧಿಕ್ಕರಿಸಿ ಮಾನವನು ಬೆಳೆಯುವ ವಿಧಾನವನ್ನು ವಿವರಿಸಿದ್ದಾರೆ'[೮] ಭಾರತೀಯ ತತ್ವ ಶಾಸ್ತ್ರದಿಂದಲೇ ಮಾನವನು ಮೂಢನಂಬಿಕೆಗಳು ಆಚರಣೆಗಳಿಗೆ ಬದ್ಧರಾಗಿ ದೈವಿಕ ಭಾವನೆಗಳನ್ನು ವ್ಯಕ್ತಪಡಿಸಿಕೊಂಡಿದ್ದಾರೆ. ದೇವರು ನಾವು ನಿರ್ಮಿಸಿದ ಮೂರ್ತಿಯಾದರೂ ಆ ಮೂರ್ತಿಗೆ ದೈವಿಕ ಅಂಶಗಳನ್ನು ತುಂಬುವುದು ನಮ್ಮಲ್ಲಿರುವ ಅಸಡ್ಡೆ, ಅಲಕ್ಷ್ಯತೆಗಳೇ ಕಾರಣ. ಇವುಗಳನ್ನು ಮೊದಲಿಗೆ ನಮ್ಮ ಮನಸ್ಸಿನಿಂದ ಕಿತ್ತೊಗೆಯಬೇಕು. ನಮ್ಮ ನಿಲುವುಗಳನ್ನು ನಾವೇ ದೃಢಪಡಿಸಿಕೊಳ್ಳಬೇಕೆ ವಿನಹಃ ದೇವರು ಏನನ್ನು ಮಾಡಲಾರ. ಮೊದಲು ಅತ್ಮವಿಶ್ವಾಸಗಳನ್ನು ಬಲಪಡಿಸಿಕೊಂಡರೆ ದೇವರು ತಮ್ಮತ್ತ ಸುಳಿಯಲಾರವು. ಇಂತಹವುಗಳಿಗೆ ಮಾರುಹೋದರೆ ನಮ್ಮನ್ನು ಹಿಡಿದುಕೊಂಡು ತಮ್ಮ ಸೆಳೆತಕ್ಕೆ ಕೊಂಡೊಯ್ಯುತ್ತವೆ. ಇದರಿಂದ ತನಗೆ ತಾನೆ ನಶಿಸಿ ಹೋಗುವನು. ಇವರು ಧರ್ಮವನ್ನು ಒಂದು ಮಾದಕ ವಸ್ತುವೆಂದು ಕರೆದಿದ್ದಾರೆ.

'ಸಮಾಜಕ್ಕೆ ದೈವದವರು ಎಂದು ಹೇಳುವ ವಾಡಿಕೆಯುಂಟು. ಅದು ಅತ್ಯಂತ ಅರ್ಥಪೂರ್ಣವಾಗಿದೆ. ದೈವ ಎಂದರೆ ವಿಧಿ; ದೈವದವರು ಎಂದರೆ ವಿಧಿಸುವರು'.[೯] ದೈವದವರು

ಎಂದರೆ ದೇವರನ್ನು ನಂಬುವ ಮನೋವಾದಿಗಳು. ಇದರಿಂದ ಎಲ್ಲಾ ವರ್ಗಗಳು ಬೇರೂರುತ್ತವೆ.ಇವು ದೇವರು ನಿರ್ಮಿಸಿದ ವರ್ಗಗಳಲ್ಲ. ನಾವು ಹುಟ್ಟಿದ ಕೂಡಲೇ ಕಂಡುಕೊಂಡ ಅಮಾನವೀಯ ಕಲ್ಪನೆಗಳೇ ವರ್ಗಗಳಾದವು. ವೈದಿಕರು ಶ್ರೇಷ್ಠರು ಎಂಬ ಕಲ್ಪನೆಯಿದೆ. ಇವರು ಹೇಳಿದ ಹಾಗೆ ಎಲ್ಲ ಜನರು ಕೇಳಬೇಕು. ಇವರು ತಮ್ಮ ದೈವಿಕ ನೆಲೆಗಳನ್ನು ಗುರುತಿಸಿ ಆಚರಣೆಗಳು ನಡತೆಗಳನ್ನು ಕಂಡುಕೊಂಡು ಅವರಷ್ಟೇ ಅವುಗಳಿಗೆ ಪಾತ್ರರಾದರು. ಇತರರನ್ನು ಸೀಮಿತಗೊಳಿಸಿದರು. ಇದರಿಂದ ಸಮಾಜದಲ್ಲಿ ಕಲಾಪಗಳು ಜಾರಿಯಲ್ಲಿ ಬಂದು ಮೂಢನಂಬಿಕೆಗಳು ದೈವಿಕ ಆಚರಣೆಗಳನ್ನು ಆಚರಿಸುವುದನ್ನು ಕಾಣಬಹುದು.

'ಭಾರತದ ಗ್ರಾಮದೇವತೆಗಳು ಖಾಯಿಲೆಗಳಿಗೆ ಸಂಬಂಧಿಸಿವೆ'.[೧೦] ದೇವರ ಕಲ್ಪನೆಯನ್ನು ದೈವವನ್ನಾಗಿಸಿಕೊಂಡು ಜನರು ದೈವಿಕ ನೆಲೆಯನ್ನು ತಮ್ಮ ಧಾರ್ಮಿಕ ಜೀವನದಲ್ಲಿ ಉಪಯೋಗಿಸಿಕೊಂಡಿದ್ದಾರೆ. ತಮಗೆ ಯಾವುದಾದರೂ ಕಾಯಿಲೆ, ಆಪತ್ತು ಬಂದರೆ ದೇವರಿಗೆ ಮೊರೆ ಹೋಗುತ್ತಾರೆ. ಆ ದೇವರೇ ಕಾರಣರೆಂದು ವ್ಯಕ್ತಪಡಿಸುತ್ತಾರೆ. ಬೆಂಗಳೂರಿನ ತ್ಯಾಗರಾಜ ನಗರದಲ್ಲಿ ಪ್ಲೇಗ ಅಮ್ಮನ ದೇವಸ್ಥಾನವಿದೆ. ಸಿಡುಬಿನ ರೋಗಕ್ಕೆ ಗಂಗಮ್ಮ, ವಾಂತಿಭೇದಿಗೆ ಮಾರಮ್ಮ, ಕೆಮ್ಮಿಗೆ ಕುಕ್ಕಲಮ್ಮ, ದಡಾರಕ್ಕೆ ಸುಕ್ಕಲಮ್ಮ, ಗಂಟಲು ರೋಗಕ್ಕೆ ಊದಲಮ್ಮ ದಕ್ಷಿಣ ಕನ್ನಡ ಜಿಲ್ಲೆ ಮೈಸೂರು ಚಾಮುಂಡಿಗೆ ಮೃತ್ಯುದೇವತೆ ತೊಟ್ಟು (ಅಮ್ಮಕ್ಕೆ) ಪಾಲಮ್ಮ ಪೂಜೆಯನ್ನು ಸಲ್ಲಿಸಿ ಆರಾಧಿಸುವುದನ್ನೂ ಇಂದಿಗೂ ನೋಡಬಹುದಾಗಿದೆ.

'ಎಲ್ಲಕ್ಕೂ ಮೊದಲು ಜನಿಸಿದವಳು ದ್ಯಾವವ್ವ, ವ್ಯವಸಾಯದ ಮನುಷ್ಯನಿಗೆ ಸಮೃದ್ಧತೆಯ ಸಂಕೇತವಾಗಿ ಪೂಜಗೊಂಡಳು'.[೧೧] ಮೊದಲು ಪ್ರಾರಂಭದಲ್ಲಿ ಶಕ್ತಿದೇವತೆಯಾಗಿ ಪೂಜಿಸುತ್ತಾರೆ. ವ್ಯವಸಾಯವನ್ನು ಮೊದಲು ಪ್ರಾರಂಭಿಸಲು ರಾಶಿ ಮಾಡಲು ವಿಶೇಷವಾಗಿ ಪೂಜಿಸಿ ನಂತರ ರಾಶಿ ಮಾಡುತ್ತಾರೆ. ಇದರಿಂದ ಸರ್ವರಿಗೂ ಸುಖ ಶಾಂತಿ ನೀಡಿ ಎಲ್ಲರೂ ತನ್ನ ಆಧೀನದಲ್ಲಿದ್ದರೆ ಆಕೆಯ ಭಕ್ತಿ ಇನ್ನಷ್ಟು ದೀರ್ಘಕಾಲವಾಗಿ ಇಂದಿಗೂ ರೂಢಿಯಲ್ಲಿದೆ. ಈ ಪದ್ಧತಿಯನ್ನು ಉತ್ತರ ಕರ್ನಾಟಕದಲ್ಲಿ ಆಚರಿಸುವುದನ್ನು ಇಂದಿಗೂ ನೋಡಬಹುದು.

ದೇವರು ನಮ್ಮ ದೃಷ್ಟಿಯಲ್ಲಿ ಹೇಗೆ ಅವತರಿಸಿದ್ದಾನೆ. ಅದು ಅವರಿವರಿಗೆ ತಿಳಿದ ವಿಷಯ ಅದರಂತೆ ಓಶೋ ತಮ್ಮ ಧಾರ್ಮಿಕತೆಯನ್ನು ತನ್ನ ನಿಲುವಿನಲ್ಲಿಯೇ ವ್ಯಕ್ತಪಡಿಸಿದ್ದನ್ನು ಇಲ್ಲಿ ನೋಡಬಹುದಾಗಿದೆ. ಮಾನವನ ಸಹಜತೆಯೊಂದಿಗೆ ಈ ಗುಣಗಳನ್ನು ದೆವ್ವ ಮತ್ತು ದೇವರು ಎಂಬುದನ್ನು ನಾವು ಹೇಗೆ ಅಭಿವ್ಯಕ್ತಿಗೆ ಒಳಪಡುತ್ತೇವೆ ಎಂಬುದನ್ನು ಹೇಳಿದ್ದಾನೆ. ದೆವ್ವ (ಕತ್ತಲು) ದೇವರು (ಬೆಳಕು) ಎಂಬುದನ್ನು ಕಲ್ಪಿಸಿಕೊಂಡು ಬೆಳಕನ್ನು ಬಿಟ್ಟು ಕತ್ತಲಿನ ಕಡೆ ಬರುವುದು ಸಹಜವಾಗಿದೆ. ಕತ್ತಲಿನಿಂದ ಬೆಳಕಿಗೆ ಹೋಗುವುದು ಸಾಧ್ಯವಿಲ್ಲ. ಬೆಳಕಿನಿಂದ ಕತ್ತಲಿಗೆ ಹೋಗಬಹುದು. ಆದರೆ ಕತ್ತಲೇ ನಮ್ಮನ್ನು ಹಿಡಿದು ನಿಲ್ಲಿಸಿದೆ. ಇವು ಎರಡು ಪಕ್ಷಿಯ ರೆಕ್ಕೆಯಂತೆ ಜೀವ ಮೃತ್ಯು ಎಂಬಂತೆ ಒಂದನ್ನು ಬಿಟ್ಟು ಹೋಗಲಾರವು. ದೆವ್ವಕ್ಕೆ ಪುರುಷ, ದೇವರನ್ನು ಸ್ತ್ರೀಗೆ ಹೋಲಿಸಿದ್ದಾರೆ.

ದೇವರು ಗುಡಿಯಲ್ಲಿಯೇ ಇರುತ್ತಾರೆ. ದೆವ್ವ ಎಲ್ಲೆಲ್ಲೂ ಪಸರಿಸಿಕೊಂಡು ತನ್ನೆಲ್ಲವುಗಳಲ್ಲಿ ಸುತ್ತಾಡುವುದನ್ನು ನೋಡುತ್ತೇವೆ.

ದೆವ್ವ ಎಂಬುದು ದೇವರ ಇನ್ನೊಂದು ರೂಪ. ಇದೊಂದು ನಮಗೆ ತಿಳಿಯದ ಹಾಗೆ ಕಾಣುತ್ತಾನೆ. ಮನುಷ್ಯನು ದೇವನನ್ನು ಪಾವನನನ್ನಾಗಿಯೂ, ಪವಿತ್ರನನ್ನಾಗಿಯೂ ಪುಣ್ಯಾತ್ಮನನ್ನಾಗಿಯೂ ನಿರ್ಮಿಸಿದ ಮೇಲೆ ಅವನು ಒಂದು ದೆವ್ವವನ್ನು ಸಹ ನಿರ್ಮಿಸಬೇಕಾಯಿತು. ಅದೊಂದು ದಾರ್ಶನಿಕ ಅವಶ್ಯಕತೆ ಅನಿವಾರ್ಯತೆ ಉಂಟಾಯಿತು. ದೆವ್ವವೂ ಕೂಡ ದೇವನದೇ ಒಂದು ಪ್ರತಿ ರೂಪ[೧೨]ವಾಗಿ ಕಾಣುತ್ತದೆ.

ದೇವರು ನಮ್ಮ ಕಣ್ಣಿಗೆ ಕಣಲಾರದೇ ನಮ್ಮನ್ನು ಆವರಿಸುತ್ತಾನೆಂಬುದೇ ನಮ್ಮೆಲ್ಲರ ನಂಬಿಕೆ. ಆದರೆ ದೈವ ಎಂಬುದು ಬುದ್ಧಿಗೆ ಮಾತ್ರ ಅಲ್ಲ. ಕಣ್ಣಿಗೂ ಕಾಣುವಂತೆ ಮಾಡಿಕೊಳ್ಳಬೇಕು ಎಂದು ಅದನ್ನು ನಂಬಿದ ಜನರಿಗೆ ಅಪೇಕ್ಷೆ ಆಯಿತು. ಇದಕ್ಕಾಗಿ ನಮ್ಮ ಪೂರ್ವಿಕರು ದೇವರಿಗೆ ಒಂದು ಮೂರ್ತಿಯನ್ನು ಕಲ್ಪಿಸಿದರು.

'ನತೇ ರೂಪಂ ನಚ ಆಕಾರೋ ನ ಆಯುದಾನಿ
ನ ಚಾಸ್ಪದಂ ತಥಾಪಿ ಪುರಾಷಾಕಾರಃ
ಭಕ್ತಾನಾಂ ತ್ವಂ ಪ್ರಕಾಶಸೇ'[೧೩]

ಎಂಬುದು ಪಾಂಚರಾತ್ರಾಗಮದ ಒಂದು ಶ್ಲೋಕ. ಆಯುಧ ಆಕಾರ ರೂಪನೆಲೆ ಯಾವುದೂ ಇಲ್ಲದ ದೈವ ತನ್ನನ್ನು ನಂಬಿದ ಭಕ್ತರಿಗಾಗಿ ವ್ಯಕ್ತಿಯ ಆಕಾರವನ್ನು ಧರಿಸುತ್ತದೆ. ಈ ವೇಳೆಗಾಗಲೇ ರಾಮಾಯಣ ಮಹಾಭಾರತ ಕಾವ್ಯಗಳು ಸೃಷ್ಠಿಯಾದವು. ದೇವರು ಲೋಕ ರಕ್ಷಣೆಗಾಗಿ ಭೂಮಿಯಲ್ಲಿ ಅವತರಿಸುತ್ತಾರೆ ಎಂಬ ಬಾವ ಮೂಡಿತ್ತು. ರಾಮಕೃಷ್ಣ ದೇವರ ಅವತಾರಗಳಾದರು ಎಂಬುದು ಇದೊಂದು ಪ್ರತೀಕವಾಗಿದೆ.

**ಪ್ರಕೃತಿ ಆರಾಧನೆಗಳು :**

ಈ ಪ್ರಕೃತಿ ಆರಾಧನೆಗಳು ನಮ್ಮ ಪ್ರಾಚೀನ ಕಾಲದ ಪರಂಪರೆಯಿಂದಲೂ ಜಾರಿಯಲ್ಲಿರುವುದನ್ನು ಇಂದಿಗೂ ಕಾಣುತ್ತಿವೆ. ಈ ಪ್ರಕೃತಿ ನಮ್ಮ ದೈವೀಸ್ವರೂಪ, ಇದರಿಂದಲೇ ನಾವು ಜೀವಿಸಲು ಕಾರಣ. ನಮ್ಮ ಪಂಚಭೂತಗಳಾದ ವಾಯು, ಅಗ್ನಿ, ಜಲ, ಭೂಮಿ ಮತ್ತು ಆಕಾಶವನ್ನೂ ಕೂಡ ನಂಬಿಕೊಂಡು ಬಂದಿದ್ದೇವೆ. ಇವುಗಳಲ್ಲಿ ಒಂದು ಇಲ್ಲವಾದರೂ ನಾವು ಜೀವಿಸಲು ಸಾಧ್ಯವಿಲ್ಲ ಎಂಬುದು ನಮಗೀಗಾಲೇ ತಿಳಿದಿದೆ. ಇದರಂತೆ ನಿಸರ್ಗ ದೇವರನ್ನು ಕೂಡ ನಮ್ಮ ಸುತ್ತಲಿನ ವಸ್ತುಗಳನ್ನು ಪೂಜಿಸುವುದು. ನಮ್ಮ ಆರ್ಯರ ದ್ರಾವಿಡರ ಕಾಲದಿಂದಲೂ ಬೆಳೆದು ಬಂದಿದೆ ಎಂಬುದನ್ನು ಇತಿಹಾಸದ ಪುಟಗಳಿಂದ ನೋಡಬಹುದಾಗಿದೆ. ಆದ್ದರಿಂದಲೇ ನಾವು 'ಪ್ರಕೃತಿ ದೇವತೆ' ಎಂದುಕೊಂಡು ಆಚರಿಸುತ್ತೇವೆ. ಈ ಪ್ರಕೃತಿಯಲ್ಲಿ ಕೆಲವೊಂದು ಗಿಡಗಳಾದ ಅರಳೀಮರ, ತುಳಸಿಗಿಡ, ಬನ್ನಿಮರ, ಬೇವಿನಮರ, ಮಾವಿನಮರ, ಹುಣಿಸೇಮರ, ರಾಗಿಮರಕ್ಕೆ ಆಲದ ಮರ,

ನೇರಳೆಗಿಡ ಮತ್ತು ಹೊಂಗೆ ಗಿಡ ಇವುಗಳನ್ನೇ ಪೂಜಿಸುವುದಲ್ಲದೆ ಇವುಗಳಿಂದ ಆಯುರ್ವೇದ ಚಿಕಿತ್ಸೆಯೂ ಮಾಡುವುದನ್ನು ಕಾಣಬಹುದಾಗಿದೆ.

ಅರಳೀಮರಕ್ಕೆ ದೈವೀಸ್ವರೂಪವಿದೆ. 'ಅಶ್ವತ್ಥನಾರಾಯಣ'ನೆಂದೂ ಕರೆಯುತ್ತಾರೆ. ಈ ಗಿಡಕ್ಕೆ 'ನೂರೆಂಟು ಪ್ರದಕ್ಷಿಣೆ ಮಾಡಿದವರಿಗೆ ಸಂತಾನ ಲಭಿಸುತ್ತದೆ. ಅದರ ಮಗ್ಗುಲಲ್ಲಿ ಒಂದು ಬೇವಿನಮರವನ್ನು ಬೆಳೆಸಿ ಎರಡಕ್ಕೂ ಶಾಸ್ತ್ರೋಕ್ತವಾಗಿ ಮದುವೆ ಮಾಡಿದರೆ ಪುಣ್ಯ ಬರುತ್ತದೆ ಎಂದು ನಂಬಿ ಮದುವೆ ಮಾಡಿಸುವ ಜನರೂ ಈಗಲೂ ಇದ್ದಾರೆ'.[೧೪]

ಈ ಗಿಡಕ್ಕೆ ವೈಜ್ಞಾನಿಕ ರೂಪದಲ್ಲಿ ನೋಡಿದರೆ ಬೆಳಗಿನ ಮುಂಜಾವಿನಲ್ಲಿ ಸಂತಾನದ ಫಲಕಾರಿಯಾಗಿ ಕೆಲವೊಂದು ಅಂಶಗಳನ್ನು ಅದು ಪಡೆಯುವುದರಲ್ಲಿರುತ್ತದೆ. ಆ ಸಮಯದಲ್ಲಿ ಪತಿ ಪತ್ನಿಯರು ಗಿಡವನ್ನು ಸುತ್ತುತ್ತಿದ್ದರೆ ಆ ಅಂಶಗಳೂ ಅವರ ಮೇಲೆ ಪ್ರಭಾವ ಬೀರಿ ಪುತ್ರ ಸಂತಾನವಾಗಬಹುದೆಂಬ ನಂಬಿಕೆ ಇದು ಬೇರೂರಿನಿಂತಿದೆ ಎಂದು ಹೇಳುತ್ತಾರೆ. ಕೆಲವೊಂದು ಗ್ರಾಮಗಳಲ್ಲಿ ಕಟ್ಟೆ ಕಟ್ಟಿ ಆ ಜಗುಲಿಯ ಮೇಲೆ ನಾಗರ ಕಲ್ಲು ಸ್ಥಾಪಿಸುತ್ತಾರೆ. ಶಿವಾರ್ಚನೆಗೆ ಬಿಲ್ವದಳ ಶ್ರೇಷ್ಠ 'ಶ್ರೀಮನ್ಮ್ಮಹಾವಿಷ್ಣುವಿ'ಗೆ ಸಮ ಎಂಬುದು ಒಂದು ಪ್ರತೀಕವಿದೆ.

ಬೇವಿನಮರ ಒಂದು ಔಷದೀಯವಾಗಿ ಸರ್ವರೋಗಗಳನ್ನು ನಿಯಂತ್ರಿಸಬಲ್ಲ ಶಕ್ತಿಯಿದೆ. ಅಲ್ಲದೆ ಬೆಳೆಗಳಿಗೆ ಬೇವಿನ ಎಣ್ಣೆ ಸಿಂಪಡಿಸಿತ್ತಾರೆ. ಬೆಳಿಗ್ಗೆ ಎದ್ದು ಈ ಗಿಡವನ್ನು ನೋಡಿದರೆ ಎಲ್ಲ ಕಾರ್ಯಗಳು ಜಯ ಲಭಿಸುವುದು, ಹಲ್ಲುಜ್ಜುವುದು, ಅರೆಹೊಟ್ಟೆಯಲ್ಲಿ ಎರಡು ಎಲೆಗಳು ತಿನ್ನಲು ಕೊಡುತ್ತಾರೆ. ಆಯುರ್ವೇದಿಯ ಗಿಡಮೂಲಿಕೆಯಾಗಿಯೂ, ಇದು ಬಳಕೆಯಾಗುತ್ತದೆ. ಇನ್ನೂ ಹಲವಾರು ಕಾರ್ಯಗಳಿಗೆ ಉಪಯೋಗಿಸುತ್ತಾರೆ. ರೈತರು ಎತ್ತುಗಳ ನಗಕ್ಕಾಗಿ, ಕೃಷಿಗೆ ಸಲಕರಣೆಯಾಗಿಯೂ ಬಳಸುತ್ತಿದ್ದಾರೆ. ಇದು ಎಲ್ಲ ಕಾರ್ಯಗಳಿಗೆ ಸಂಜೀವಿನಿಯಾಗಿಯೂ ಬೇರೂರಿದೆ ಎಂದು ಹೇಳಬಹುದು.

ತುಳಸಿಗಿಡ ವಿಷ್ಣುವಿನ ಸ್ವರೂಪದಲ್ಲಿ ಕಾಣಿಸುತ್ತದೆ. ಎಲ್ಲಕ್ಕಿಂತಲೂ ತುಳಸಿ ಪೂಜೆಯೇ ಶ್ರೇಷ್ಠ ಎಂಬ ನಂಬಿಕೆ ಇದೆ. ಔಷಧೋಪಚಾರ ಶಕ್ತಿಯನ್ನು ಹೊಂದಿದೆ, ಹಲ್ಲುಗಳನ್ನು ಗಟ್ಟಿಗೊಳಿಸುತ್ತದೆ. ಜ್ಞಾನದ ವೃದ್ಧಿಯನ್ನು ಹೆಚ್ಚಿಸುತ್ತದೆ. ಇದರ ಮಾಲೆಯನ್ನು ಧರಿಸುವುದರಿಂದ ಎಲ್ಲ ರೋಗಗಳಿಗೆ ನಿರೋಧಕ ಶಕ್ತಿಯಾಗಿ, ಮನಸ್ಸಿಗೆ ಶಾಂತಿ ನೆಮ್ಮದಿಯನ್ನು ನೀಡುತ್ತದೆ.

ವೈಜ್ಞಾನಿಕವಾಗಿ ನೋಡಿದರೆ ಪ್ರಪಂಚದಲ್ಲಿಯೇ ಅತಿ ಹೆಚ್ಚು ಆಮ್ಲಜನಕವನ್ನು ಹೊರಸೂಸುವ ಗಿಡವಾಗಿದೆ. ಮತ್ತು ಇಂಗಾಲದ ಡೈ ಆಕ್ಸೈಡ್‌ನ್ನು ಅತೀ ಹೆಚ್ಚು ಹೀರಿಕೊಂಡು ವಾತಾವರಣವನ್ನು ಸಮತೋಲನದಲ್ಲಿಡಲು ಸಹಕಾರಿಯಾಗಿದೆ.

ದೇವರ ಗುಡಿಯಲ್ಲಿ ಪ್ರಸಾದ ಕೊಡುವ ಬಟ್ಟಲಿನಲ್ಲಿಯೂ ತುಳಸಿ ಎಲೆಯನ್ನು ಹಾಕಿರುತ್ತಾರೆ. ಈ ನೀರಿನಿಂದ ನಮ್ಮಲ್ಲಿರುವ ಎಲ್ಲ ಕಲ್ಮಶತೆಯನ್ನು ಹೋಗಲಾಡಿಸುತ್ತದೆ ಎಂಬುದು ನಮ್ಮ ನಂಬಿಕೆಯಾಗಿದೆ. ತತ್ವಪದಕಾರರು ತಮ್ಮ ಹಾಡಿನಲ್ಲಿ ಈ ರೀತಿ ವ್ಯಕ್ತಪಡಿಸಿದ್ದಾರೆ.

ಎಲ್ಲ ಸ ಧನವಿದ್ದು ತುಳಸಿಯಿಲ್ಲದ
ಪೂಜೆ ವಲ್ಲೆನೂ ಹರಿ ಕೊಳ್ಳೆ ನೂ....

ಬನ್ನಿಮರ ವಿಜಯದಶಮಿ ದಿನ ಒಂದೊಂದು ಎಲೆಗೂ ಬಂಗಾರಕ್ಕಿಂತಲೂ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದೇವೆ. 'ಬನ್ನಿ ತೆಗೆದುಕೊಂಡು ಬಂಗಾರ ಹಾಗೆ ಬಾಳೆಂದು' ನಮ್ಮ ಹಿರಿಯರು ನಮಗೆ ಆರ್ಶೀವಾದವನ್ನು ನೀಡುತ್ತಾರೆ. ದೇವರಿಗೂ ವಿಶೇಷ ದಿನವಾಗಿರುತ್ತದೆ. ಊರಿನ ಹಿರಿಯರು ಸೇರಿಕೊಂಡು ತಮ್ಮ ಊರಿನ ಆಯ-ವ್ಯಯಗಳನ್ನೆಲ್ಲ ಆ ಕಾಳಿಕಾದೇವಿಗೆ (ಬನ್ನಿಗಿಡಕ್ಕೆ) ಸಮರ್ಪಿಸಿಕೊಂಡು ಅಲ್ಲಿಂದ ಮುಂದೆ ದೇವರಿಗೆ ಮತ್ತು ಹಿರಿಯರಿಗೆ ಬನ್ನಿಯನ್ನು ಕೊಟ್ಟು ಕೈ ಮುಗಿಯುವುದೇ ಈ ಹಬ್ಬದ ವಿಶೇಷವಾಗಿದೆ. ಮಹಾಭಾರತದ ಸನ್ನಿವೇಷದಲ್ಲಿ ಪಾಂಡವರು-ಕೌರವರು ಯುದ್ಧದಲ್ಲಿ ಹೋರಾಡಿ ಕೊನೆಗೆ ಪಾಂಡವರು ಸೋತು ಹನ್ನೆರೆಡು ವರ್ಷ ವನವಾಸಕ್ಕೆ ಹೋಗುವ ಸಮಯದಲ್ಲಿ ತಮ್ಮ ಎಲ್ಲ ಆಯುಧಗಳನ್ನು ಕಾಳಿಕಾದೇವಿಗೆ ಸಮರ್ಪಿಸಿ, ತಮ್ಮ ವೇಷಭೂಷಣಗಳನ್ನೆಲ್ಲ ಬದಲಾಯಿಸಿಕೊಂಡು ಅಲ್ಲಿಂದ ಹೋಗುತ್ತಾರೆ. ಮತ್ತೆ ಹನ್ನೆರೆಡು ವರ್ಷ ಮುಗಿದ ನಂತರ ಆ ಕಾಳಿಕಾದೇವಿಗೆ ಭಕ್ತಿಯಿಂದ ನಮಸ್ಕರಿಸಿ ತಮ್ಮ ಆಯುಧಗಳನ್ನು ಪಡೆದು ನಿಜ ರೂಪದಲ್ಲಿ ಬಂದು ರಾಜ್ಯವಾಳುತ್ತಾರೆ. ಆ ದಿನವನ್ನೇ 'ಆಯುಧ ಪೂಜೆ' ಎಂದು ಪೂಜಿಸುತ್ತೇವೆ. ಅಂದು ಪಾಂಡವರಿಗೆ ಜಯ ಲಭಿಸಿದ ದಿನವೇ 'ವಿಜಯದಶಮಿ' ಯಾಗಿ ಇಂದಿಗೂ ಆಚರಿಸುತ್ತೇವೆ. ಅಂದಿನ ದಿನದಲ್ಲಿ ಪಾಂಡವರು ಆ ಗಿಡದಲ್ಲಿ ಇರುತ್ತಾರೆ ಎಂಬ ಪ್ರತೀಕವೂ ಇದೆ.

ಈ ಎಲ್ಲ ಅಂಶಗಳಿಂದ ನಮ್ಮ ಆರ್ಷೇಯ ಚಿಂತನೆಗಳು ಇಂದಿಗೂ ಫಲಕಾರಿಯಾಗುತ್ತಲಿವೆ. ದೇವರ ಕಲ್ಪನೆಗಳು, ಮೂರ್ತಿಪೂಜೆಗಳು ಮತ್ತು ಪ್ರಕೃತಿ ಆರಾಧನೆಗಳು ಶಾಸ್ತ್ರೋಕ್ತವಾಗಿ ಮುಂದುವರಿಯುತ್ತಲಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

**ಮೂರ್ತಿ ಪೂಜೆ :**

ಮೂರ್ತಿ ಪೂಜೆಯು ಪ್ರಾಚೀನ ಕಾಲದಿಂದಲೂ ಸಾಗಿ ಬಂದಿದೆ. ಮೂರ್ತಿಗಳು ನಮ್ಮ ದೈವ ಸಂಪನ್ಮೂಲಗಳೆನ್ನಬಹುದು. ನಮ್ಮ ಇಷ್ಟಾರ್ಥಗಳನ್ನು ವ್ಯಕ್ತಪಡಿಸಲು ದೇವರಿಗೆ ಮೊರೆ ಹೋಗಲು ಪ್ರೇರೇಪಿಸುತ್ತೇವೆ. ಬೇಡಿದ ವರಗಳನ್ನು ಕೊಡುವುದು ಉನ್ನತಾಭಿರುಚಿಯನ್ನು ಉಂಟುಮಾಡುವುದು ಮನಸ್ಸಿನಲ್ಲಿರುವ ದುಗುಡ ದುಮ್ಮಾನಗಳನ್ನು ದೂರ ಮಾಡಿ ಉನ್ನತವಾದ ಮಾರ್ಗವನ್ನು ತೋರಿಸುತ್ತವೆ ಎಂಬ ನಂಬಕೆ ಸಾಕ್ಷಿಭೂತವಾಗಿದೆ.

ಭಾರತೀಯ ಪರಂಪರೆಯಲ್ಲಿ ಮೂರ್ತಿಪೂಜೆಯೂ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಮೂರ್ತಿಯಲ್ಲಿರುವ ನಂಬಿಕೆಗಿಂತ ನಮ್ಮಲ್ಲಿಯ ಮನಸ್ಸಿನ ಪರಿಣಾಮ ಅದಕ್ಕಿಂತಲೂ ಭಿನ್ನವಾಗಿರುವುದರಿಂದಲೇ ನಮ್ಮ ಶ್ರಮ ಸಾರ್ಥಕ ಎನ್ನುವುದು. ನಮ್ಮ ಮನೋಭಿಲಾಷೆಗಳು ಸಫಲವಾದಾಗ ಅದು ದೈವವೆಂಬ ನಂಬಿಕೆಯು ಇನ್ನಷ್ಟು ಬಲಪಡಿಸುವುದಲ್ಲದೆ, ನಾವು ನಮ್ಮ

ಸುತ್ತಲಿನವರಿಗೂ ದೇವರ ಬಗ್ಗೆ ಉತ್ತಮ ಅಭಿಪ್ರಾಯವನ್ನು ಹೇಳುತ್ತೇವೆ. ಇಲ್ಲವಾದರೆ ಅದೊಂದು ಭ್ರಮೆ ಅಥವಾ ಊಹೆ ಎಂಬಂತೆ ತಿಳಿದುಕೊಳ್ಳುತ್ತೇವೆ. ಉದಾ: ಧರ್ಮಸ್ಥಳ ಮಂಜುನಾಥ, ಕಾಶಿವಿಶ್ವನಾಥ, ತಿರುಪತಿ ತಿಮ್ಮಪ್ಪ, ಹಂಪೆಯ ವಿರುಪಾಕ್ಷ ಮತ್ತು ಮೈಸೂರಿನ ಚಾಮುಂಡಿಯಂತಹ ದೇವರಲ್ಲಿ ನಮ್ಮ ನಂಬಿಕೆಯೆಂಬುದು ಅಚಲವಾಗಿದೆ. ಮನೋಭಿಲಾಷೆಗಳು ಈಡೇರಬಹುದೆಂಬ ಆಧಾರದ ಮೇಲೆ ನಿಂತಿರುತ್ತೇವೆ. ನಮ್ಮನ್ನು ನಾವು ನಿಗ್ರಹಿಸದೇ ಹೋದರೇನು ಇದ್ದರೇನು ಎಂಬ ಚಿಂತನೆ ನಮ್ಮಲ್ಲಿಯೇ ಬೇರೂರುತ್ತದೆ. ಇದನ್ನು ಕಂಡು ಹಿಡಿಯದೇ ದೇವರೊಂದಿಗೆ ಮೊರೆ ಹೋಗುವುದು ನಮ್ಮ ವೈಚಾರಿಕ ಪರಂಪರೆಯಾಗಿದೆ. ಆದ್ದರಿಂದಲೇ ನಾವು ಕಷ್ಟ ಬಂದರೆ ದೇವರ ಬಳಿ ಹೋಗಿ ನಮ್ಮ ಕಷ್ಟಗಳನ್ನು ಇತರೆಲ್ಲವುಗಳನ್ನು ಆ ವಿಗ್ರಹದ ಮುಂದೆ ತೋಡಿಕೊಂಡರೆ ದೇವರು ನಮಗೆ ಖಂಡಿತವಾಗಿಯೂ ಫಲನೀಡುತ್ತಾನೆ ಎಂಬುದು ನಮ್ಮ ನಂಬಿಕೆಯಾಗಿದೆ.

ಇಂತಹ ವಿಗ್ರಹಗಳನ್ನು ನಾವು ಪೂಜಿಸುವುದರಿಂದಲೇ ಮನಸ್ಸಿಗೆ ಶಾಂತಿ, ಏಕಾಗ್ರತೆಯನ್ನು ಕಂಡುಕೊಳ್ಳಲು ಸಾಧ್ಯ. ದೇವಾಲಯಗಳಿಗೆ, ಮಠ ಮಾನ್ಯಗಳಿಗೆ ಹೋಗಿ ನೆಮ್ಮದಿಯನ್ನು ಕಂಡುಕೊಳ್ಳುವುದು ನಮ್ಮ ಧಾರ್ಮಿಕಾಚರಣೆಯಾಗಿದೆ. ಧರ್ಮವನ್ನು ಯಾರು ಪಾಲಿಸುವುದಿಲ್ಲವೋ ಅವನು ಕ್ರೂರಿ, ಅಥವಾ ರಾಕ್ಷಸಿ ಎಂಥೆಂದುಕೊಂಡು ಇಂತಹವರನ್ನು ನಾವು ಬಹಿಷ್ಕರಿಸುತ್ತೇವೆ. ನಿಜವಾಗಿಯೂ ಇರುವುದು ನಮ್ಮ ಮನಸ್ಸಿನ ಆಂತರ್ಯದಲ್ಲಿ ಅದನ್ನು ತಿಳಿಯದೇ ಏನೇನೋ ಕಲ್ಪನೆಗಳ ಮೊರೆ ಹೋಗುವುದಾಗಿದೆ.

ಆಸ್ತಿಕರು ನಾಸ್ತಿಕರು ಎಂಬುದನ್ನು ಇಲ್ಲಿ ಸರಳೀಕರಿಸಬಹುದಾಗಿದೆ. ಆಸ್ತಿಕರೆಂದರೆ ದೇವರಲ್ಲಿ ನಂಬಿಕೆಯನ್ನಿಟ್ಟವರು. ಇವರು ಎಲ್ಲದರಲ್ಲಿಯೂ ದೇವರಿದ್ದಾನೆ ಎಂಬುದನ್ನು ತಿಳಿದುಕೊಂಡಿರುತ್ತಾರೆ. ಇದನ್ನು ಬಿಟ್ಟು ಬೇರೆ ಏನೇನೋ ಹೇಳಿದರೆ ನಿಮಗೆ ದೇವರ ಬಗ್ಗೆ ಅಭಿಮಾನವಿಲ್ಲ, ದೇವರಿಲ್ಲ ಎಂದು ಕೊಂಡಿದ್ದೀರಿ. ದೇವರು ಎಲ್ಲೆಲ್ಲಿಯೂ ಇದ್ದಾರೆ ಎಂಬುದನ್ನು ನಮಗೆ ವಿವರವಾಗಿ ತಿಳಿಸುತ್ತಾರೆ. ಇನ್ನೂ ನಾಸ್ತಿಕರೆಂದರೆ ದೇವರು ಎಲ್ಲೆಲ್ಲಿಯೂ ಇಲ್ಲ. ನಮ್ಮ ಮನಸ್ಸಿನ ದೇವರಿಗಿಂತ ಇನ್ನೂ ದೇವರಿಲ್ಲ ಎಂದು ಸರಳವಾಗಿಯೂ ಹೇಳುತ್ತಾರೆ ಆದರೆ ಇಂತಹವರು ಕಡಿಮೆಯೇ ಎಂದು ಹೇಳಬಹುದು. ಇಂತಹವರಲ್ಲಿ ವ್ಯತ್ಯಾಸವೇನೆಂದರೆ ನಮ್ಮಲ್ಲಿಯ ಆತ್ಮವಿಶ್ವಾಸವನ್ನು ನಾವು ನಂಬಲಿಲ್ಲ ಎಂದರೆ ಬೇರೆ ಇನ್ನಾರು ನಂಬುತ್ತಾರೆ. ಆದ್ದರಿಂದಲೇ ಮೊದಲು ನಮ್ಮ ತನು, ಮನ, ಧನಗಳನ್ನು ನಮ್ಮದಾಗಿಸಿಕೊಂಡರೆ ಮಿಕ್ಕೆಲ್ಲವುಗಳು ನಮ್ಮಲ್ಲಿಯೇ ಕಂಡುಕೊಳ್ಳಬಹುದೆಂಬ ಹೆಗ್ಗಳಿಕೆಯನ್ನು ಇಲ್ಲಿ ಹೇಳಬಹುದು.

ಉದಾಹರಣೆ ನಮ್ಮ ಇತಿಹಾಸದ ಪುಟಗಳಲ್ಲಿ ನೋಡಿದರೆ ಮಹ್ಮದ್ ಘಜನಿಗೆ ವಿಗ್ರಹ ಬಂಜಕ ನೆಂದೂ ಬಿರುದು ಕೊಟ್ಟಿದ್ದು ಕಾಣಬಹುದು. ಇವರು ಅಷ್ಟೇ ಕ್ರೂರವಾದ ವರ್ತನೆಗಳನ್ನು ನಡೆಸಿ ಹಿಂದೂ ಧರ್ಮಕ್ಕೆ ಕಂಠಕ ಒದಗಿಸಿದರೆಂದು ಪ್ರಾಯವನ್ನೇ ಹಿಡಿದು ನಿಲ್ಲಿಸಿದನೆಂದು ಇವನನ್ನು ದೂಶಿಸುತ್ತೇವೆ. ಇಂತಹ ಆದರ್ಶ ಆಡಳಿತವನ್ನು ಅಂದೇ ಕಟ್ಟಿಕೊಂಡಿದ್ದರು. ಆದರೆ

ಅದು ಇಂದಿಗೂ ಸರಿಯಾಗಿ ಸಫಲವಾಗದೇ ಹಾಗೆ ಮುಂದುವರಿದುಕೊಂಡು ಬಂದಿರುವುದನ್ನು ಕಾಣುತ್ತೇವೆ.

**ವಿದ್ಯೆ :**

ಪ್ರಾಚೀನ ಕಾಲದಿಂದಲೂ ವಿದ್ಯೆ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡು ಬಂದಿದೆ. ಇದು ಮಾನವನನ್ನು ಪಶುವಿನಿಂದ ಪಾಮರರನ್ನಾಗಿಸುತ್ತದೆ. ಬೇಡಿದ ವರವನ್ನು ಕೊಡುವ ಕಾಮಧೇನು ಕಲ್ಪವೃಕ್ಷದಂತೆ ನಮ್ಮ ಜೀವನದ ಗುರಿಯನ್ನು ಉನ್ನತ ಮಟ್ಟದ್ದಾಗಿ ರೂಪಿಸುವುದು. ಆತ್ಮಜ್ಞಾನವನ್ನು ಪಡೆದುಕೊಂಡು ಆತ್ಮೀಯತೆಯೊಂದಿಗೆ ಎಲ್ಲರೊಂದಿಗೆ ಕೂಡಿ ಬಾಳುವುದನ್ನು ಕಲಿಸಿಕೊಡುತ್ತದೆ.

ಈ ವಿದ್ಯೆ ಆತ್ಮಜ್ಞಾನವನ್ನು ಪಡೆಯಲು ಒಂದು ಮಾರ್ಗವಾಗಿದೆ. ವಿದ್ಯೆಯಲ್ಲಿ ಎರಡು ರೂಪಗಳನ್ನು ನೋಡಬಹುದು. ಪರಾವಿದ್ಯೆ ಮತ್ತು ಅಪಾರವಿದ್ಯೆ. ಮನುಷ್ಯನ ಆತ್ಮದ ವಿಕಾಸಕ್ಕೆ ಸಾಧಕವಾದುದು ಪರಾವಿದ್ಯೆ. ಇದೇ ಶ್ರೇಷ್ಠವಾದುದು. ಅದರಂತೆಯೇ ಕಠೋಪನಿಷತ್ತಿನಲ್ಲಿ ನಚಿಕೇತನಿಗೆ ಯಮನು ಹೇಳುತ್ತಾನೆ. ಎರಡು ಮಾರ್ಗಗಳಿವೆ. ಒಂದು ಶ್ರೇಯೋಮಾರ್ಗ ಮತ್ತೊಂದು ಪ್ರಯೋಮಾರ್ಗ. ಶ್ರೇಯಸ್ಸನ್ನು ವಿವೇಕಿಗಳು ಬಯಸುವರು, ಮೂರ್ಖರು ಶ್ರೇಯಸ್ಸನ್ನು ಬಯಸುವರು, ಅಪಾರವಿದ್ಯೆಯ ಫಲ ಪ್ರೇಯಸ್ಸಾದರೆ ಪರಾವಿದ್ಯೆಯ ಫಲ ಶ್ರೇಯಸ್ಸು.[೧೫]

ವಿದ್ಯೆಯೇ ವಿನಯಕ್ಕೆ ಭೂಷಣ ಎಂಬಂತೆ ವಿದ್ಯೆಯು ಅಂದು ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿತ್ತು. ಇವರು ವೇದಗಳನ್ನು ಬಲ್ಲವರಾಗಿದ್ದರಿಂದ ಸಂಸ್ಕೃತಿಯ ಪಾಂಡಿತ್ಯವನ್ನು ಇವರು ಹುಟ್ಟಿನಿಂದಲೇ ಪಡೆದುಕೊಂಡಿದ್ದಾರೆಂದು ತಿಳಿದುಬಂದಿದೆ. ಆದ್ದರಿಂದಲೇ ವೇದಗಳನ್ನು ಪರಿಪೂರ್ಣವಾಗಿ ಪಾರಾಯನ ಮಾಡುವುದಕ್ಕೆ ಸೀಮಿತರಾಗಿದ್ದರು. ನಂತರ ಕ್ಷತ್ರಿಯರು ಇವರ ಕೆಳ ಸ್ಥರದಲ್ಲಿ ನಿಂತುಕೊಂಡಿದ್ದರು. ಆದರೂ ಇವರು ಬಿಲ್ವಿವಿದ್ಯೆಗೆ ಹೆಚ್ಚು ಪ್ರೋತ್ಸಾಹ ನೀಡಿದ್ದು ಕಂಡುಬರುತ್ತದೆ. ಇನ್ನುಳಿದ ಸಾಮಾನ್ಯರು ತಮ್ಮ ಪಾರಂಪರಿಕ ಕಸುಬುಗಳನ್ನೇ ಮುಂದುವರೆಸಿಕೊಂಡು ಅವರವರ ವೃತ್ತಿ ಜೀವನವನ್ನು ಅನುಸರಿಸಿಕೊಂಡು ಬಂದಿದ್ದನ್ನು ಇಂದಿಗೂ ಕಾಣಬಹುದು.

ವಿದ್ಯೆಯ ವಿಷಯದಲ್ಲಿ ಪ್ರಾಚೀನ ಪರಂಪರೆಯಲ್ಲಿ ಹೀಗೆ ನೋಡಬಹುದು. ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಸರ್ವದ್ರವ್ಯಗಳಲ್ಲಿ ವಿದ್ಯೆಯೇ ನಿಜವಾದ ಧನ. ಏಕೆಂದರೆ ಅದನ್ನು ಯಾರೂ ಅಪಹರಿಸಲಾರರು, ಅದು ಅನರ್ಘ್ಯವಾದುದು ಮತ್ತು ಅಕ್ಷಯವಾದುದು. ವಿದ್ಯೆಯಿಂದ ಬರುವ ಸುಖವೇ ನಿಜವಾದ ಸುಖ. ಅದರ ಮೆಟ್ಟಿಲುಗಳನ್ನು ಹೀಗೆ ಗುರುತಿಸಬಹುದು. 'ವಿದ್ಯೆಯಿಂದ ವಿನಯ, ವಿನಯದಿಂದ ಪಾತ್ರತೆ, ಪಾತ್ರತೆಯಿಂದ ಧನ, ಧನದಿಂದ ಧರ್ಮ, ಧರ್ಮದಿಂದ ಸುಖ. ವಿದ್ಯೆಯು ಕಲ್ಪಲೆಯಂತೆ ಯಾವುದನ್ನೂ ತಾನೆ ಕೊಡುವುದಲ್ಲ? ಅದು ತಾಯಿಯಂತೆ ಕಾಪಾಡುತ್ತದೆ. ತಂದೆಯಂತೆ ಸರಿಯಾದ ಮಾರ್ಗದಲ್ಲಿ ನಿಯೋಜಿಸುತ್ತದೆ. ಪ್ರಿಯೆಯಂತೆ ಕಷ್ಟಗಳನ್ನು ಹೋಗಲಾಡಿಸಿ ಸಂತೋಷಗೊಳಿಸುತ್ತದೆ. ಐಶ್ವರ್ಯವನ್ನು ತರುತ್ತದೆ. ದಶ ದಿಕ್ಕುಗಳಲ್ಲಿ ಕೀರ್ತಿಯನ್ನು ಹರಡುತ್ತದೆ'.[೧೬]

ವೇದಗಳ ಕಾಲದಲ್ಲಿ ವಿದ್ಯೆಯನ್ನು ಕಲಿಯಬೇಕಾದರೆ ಗುರುಮನೆಯೇ ಪಾಠಶಾಲೆಯಾಗಿತ್ತು. ವಿದ್ಯಾರ್ಥಿಯು ಗುರುವಿನ ಮನೆಯಲ್ಲಿ ಗುರುಸೇವೆ ಮಾಡುತ್ತಾ ಗುರುವಿನಿಂದ ವಿದ್ಯೆಯನ್ನು ಕಲಿಯುತ್ತಿದ್ದನು. ಇಂಥ ವಿದ್ಯಾರ್ಥಿಯನ್ನು ಅಂತೇವಾಸಿ ಎಂದು ಕರೆಯುತ್ತಿದ್ದರು. ಗುರುವಿನೊಡನೆ ಒಂದೇ ಮನೆಯಲ್ಲಿ ವಾಸಿಸುತ್ತಿದ್ದುದರಿಂದ ಆ ಹೆಸರು ಬಂದಿದೆ. ಅಲ್ಲದೆ ವಿದ್ಯಾರ್ಥಿ ಆ ಊರಿನಲ್ಲಿ ಭಿಕ್ಷಾನ್ನ ತಂದು ಊಟ ಮಾಡಬೇಕಾಗಿತ್ತು. ಗುರು ಶಿಷ್ಯರ ಸಂಬಂಧ ಅನೋನ್ಯವಾಗಿತ್ತು. ಮೇಲು, ಕೀಳು ಎಂಬ ಭೇದ ಭಾವವನ್ನು ಗುರುಗಳು ತೋರಿಸುತ್ತಿರಲಿಲ್ಲ. ಗುರುವೇ ದೈವ ಎಂದುಕೊಂಡು ಗುರುಸೇವೆಯಲ್ಲಿ ತೊಡಗಿ ವಿದ್ಯೆ ಕಲಿಯುವ ಪರಿಪಾಠವಿತ್ತು. ಇಂತಹ ವಿದ್ಯೆ ಆಗಲೇ ಪ್ರಾರಂಭವಾಗಿದ್ದರಿಂದ, ವಿದ್ಯಾಭ್ಯಾಸದ ವ್ಯಕ್ತಿಯ ವಿಕಾಸದಾರಿಯಾದ್ದರಿಂದ ವಿದ್ಯೆ ಕಲಿಯಲೇಬೇಕೆಂಬ ದಾಹ ಅಂದು ಕೆಲವೇ ಜನರಲ್ಲಿ ಆಸಕ್ತಿ ಹುಟ್ಟಿಸಿತ್ತು. ಆದ್ದರಿಂದಲೇ ವಿದ್ಯಾಸಂಸ್ಥೆಗಳೆಂದು ಕರೆಯಿಸಿಕೊಳ್ಳುವ ಕೇಂದ್ರ್ರಗಳು ಇದ್ದಿಲ್ಲ. ಈ ವ್ಯವಸ್ಥೆಯಲ್ಲಿ ವಿದ್ಯಾರ್ಥಿ ಯಾವ ಸಂಸ್ಥೆಗೂ ಸೇರಿದವನಲ್ಲ. ತನ್ನ ಉಪಾಧ್ಯಾಯನಿಗೆ ಸೇರಿದವನು ಎಂದು ಗುರುಗಳು ಭಾವಿಸುತ್ತಿದ್ದರು. ಪ್ರೀತಿಯ ಜೊತೆಗೆ ಕಠಿಣ ಅಭ್ಯಾಸಗಳೊಂದಿಗೆ ವಿದ್ಯಾರ್ಥಿಗಳನ್ನು ತಯಾರಿಸುತ್ತಿದ್ದರು. ಅಂದು ಮ್ಯಾಟ್ರಿಕ್‌ಲೇಷನ್ ಮುಗಿಸಿದವರು ಇಂದೂ ಪದವಿಗೆ ಸಮ ಎಂದೆನ್ನಬಹುದು. ಅಂದಿನ ದಿನದಲ್ಲಿ ವಿದ್ಯೆಯ ಜೊತೆಗೆ ಇತರ ಕರಕುಶಲ ವೃತ್ತಿಗಳಲ್ಲಿ ಇತರ ವ್ಯವಹಾರಾಧ್ಯಯನಗಳಲ್ಲಿಯೂ ತಕ್ಕ ಪಾಂಡಿತ್ಯವನ್ನು ಕರಗತ ಮಾಡಿಕೊಳ್ಳುವ ಪಾಂಡಿತ್ಯ ಪ್ರತಿಭೆಗಳನ್ನು ವಿದ್ವತ್ತನ್ನು ಪಡೆದುಕೊಂಡಿದ್ದರು.

ಕ್ರಿಸ್ತಪೂರ್ವ ಮೂರನೇ ಶತಮಾನದ ಅಶೋಕನ ಕಾಲದಲ್ಲಿ ಬೌದ್ಧವಿಹಾರಗಳು ದೊಡ್ಡ ಸಂಸ್ಥೆಗಳಾಗಿ, ವಿದ್ಯಾಕೇಂದ್ರ್ರಗಳಾಗಿ ಬಳೆದು ಬಂದಿರುವುದನ್ನು ಕಾಣಬಹುದು. ಇಲ್ಲಿಂದ ಎಲ್ಲ ರೀತಿಯ ಸೌಲಭ್ಯಗಳು ಜಾರಿಗೆ ಬಂದು ವಿದ್ಯೆಗೆ ಹೆಚ್ಚಿನ ಸೌಲಭ್ಯ ಪ್ರಾರಂಭಗೊಂಡವು. ಇವು ಆರಂಭದಲ್ಲಿ ಭಿಕ್ಷು ಭಿಕ್ಷುಣಿಯರು (ಬೌದ್ಧ ವಿಹಾರ) ಶಿಕ್ಷಣಕ್ಕಾಗಿ ಮಿಸಲಾಗಿದ್ದರೂ ಕ್ರಮೇಣ ಉಳಿದವರು ಸೇರಿಸಿಕೊಂಡರು. ಇದರಿಂದ ಪ್ರೇರಣೆಯನ್ನು ಹೊಂದಿ ಹಿಂದೂಗಳೂ ತಮ್ಮ ವಿದ್ಯಾಕೇಂದ್ರ್ರಗಳನ್ನು ಅಲ್ಲಲ್ಲಿ ಸ್ಥಾಪಿಸಿ ವಿದ್ಯೆಯನ್ನು ನೀಡುವುದರ ಜೊತೆಗೆ ವೃತ್ತಿ ತರಬೇತಿ ಕೇಂದ್ರ್ರಗಳನ್ನು ಪ್ರಾರಂಭಿಸಿದರು.

ಕರ್ನಾಟಕದಲ್ಲಿ ಮೊದಲಿಗೆ ಪ್ರಾಚೀನ ದೇವಾಲಯಗಳು ವಿದ್ಯೆಯನ್ನು ಕಲಿಸಿಕೊಡುವ ಕೇಂದ್ರ್ರಗಳಾಗಿದ್ದವು. ಇಂದಿಗೂ ಕೂಡ ಕೆಲವೊಂದು ಹಳ್ಳಿಗಳಲ್ಲಿ ದೇವಾಲಯಗಳಲ್ಲಿ ಸಾಯಂಕಾಲದ ಸಮಯದಲ್ಲಿ ಶಿಕ್ಷಣ ನೀಡುತ್ತಿರುವುದನ್ನು ನೋಡಬಹುದು. ಉದಾ ತುಮಕೂರು ಸಿದ್ದಗಂಗಾಮಠ, ಗುಲ್ಬರ್ಗಾ ಶರಣ ಬಸವೇಶ್ವರ ಮಠಗಳಲ್ಲಿ ಪ್ರವಚನದ ಜೊತೆಗೆ ವಿದ್ಯಾ ಪೀಠಗಳನ್ನು ಸ್ಥಾಪಿಸಿ ವಿದ್ಯಾರ್ಜನೆ ಮಾಡಿಸುವುದನ್ನು ಕಾಣಬಹುದು.

ಪಂಪನ ಹೇಳಿಕೆ ಮಹತ್ವವನ್ನು ವಿದ್ಯೆಗಿರುವ ಎತ್ತಿಹಿಡಿದಿದೆ. 'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್'[೧೭] ವಿದ್ಯಾರ್ಥಿಯಾಗಿದ್ದವರೂ ಎಲ್ಲಕ್ಕೂ ಸಿದ್ಧರಿರಬೇಕು. ಏನೇ ಕಷ್ಟಬಂದರೂ ಎದುರಿಸುತ್ತೇನೆ ಮುನ್ನಡೆಯುತ್ತೇನೆ ಎನ್ನುವ ತಾಳ್ಮೆ,

ಮನೋಭಾವವಿರುಬೇಕು. ಆಸಕ್ತಿ ದೃಢಸಂಕಲ್ಪ ಮನೋಸ್ಥೈರ್ಯವಿರಬೇಕು. ಮತ್ತು ಹಿರಿಯರನ್ನು ಗೌರವದಿಂದ ಕಾಣಬೇಕು ಅಹಂಕಾರದಿಂದ ದೂರವಿರಬೇಕು. ಕಲಾಕಾರನೂ ಸಾಹಿತ್ಯಶೀಲನೂ, ಸಂಸ್ಕೃತಿ ಪ್ರಿಯನೂ ಆಗಿರಬೇಕು. ಕೆಲವೊಂದು ಶಾಸನಗಳಲ್ಲಿಯೂ ವಿದ್ಯೆಗೆ ತೋರಿಸಬೇಕಾದ ಗುಣಾಸಕ್ತಿಗಳನ್ನು ಇಂದಿಗೂ ನೋಡಬಹುದು.

ಭಾರತೀಯ ಪರಂಪರೆಗಳಲ್ಲಿ 'ವಿದ್ಯೆ' ಎಂಬುದು ತನ್ನದೇ ನಿಲುವುಗಳನ್ನು ಹೊಂದಿದೆ. ವಿದ್ಯಾ ಧಾನವು ಅಂದು ಪ್ರಮುಖವಾಗಿ ಅಗ್ರಹಾರ, ದೇವಸ್ಥಾನ ಅಥವಾ ಮಠ, ಬ್ರಹ್ಮಪುರಿ ಮತ್ತು ಘಟಿಕಾಸ್ಥಾನಗಳಲ್ಲಿ ನಡೆಯುತ್ತಿತ್ತು. ಪರಿಪೂರ್ಣವಾಗಿ ವಿದ್ಯಾರ್ಥಿಗಳು ಆ ಕೇಂದ್ರಗಳ ನಿಯಮಗಳನ್ನು ಒಪ್ಪಿಕೊಂಡು ಆಧೀನರಾಗಿರುತ್ತಿದ್ದರು. ಅಂದು ವಿದ್ಯೆಯೊಂದಿಗೆ ವೃತ್ತಿ ಕೌಶಲ್ಯಗಳಲ್ಲೂ ನಿಪುಣರಾಗಿರುತ್ತಿದ್ದರು. ಈ ಕೇಂದ್ರಗಳು ಪ್ರಾಧ್ಯಾಪಕರಿಗೆ, ಪಾಠ ಭೋದನೆ, ವಸತಿಗೆ, ಕೆಲವೊಬ್ಬರು ಧಾನದ ದತ್ತಿಗಳನ್ನು ನೀಡುತ್ತಿದ್ದರು ಇಂತಹ ಧಾನಗಳಿಂದಲೇ ಅಗ್ರಹಾರಗಳು ವಿದ್ಯಾ ಬೋಧನೆಯ ಖರ್ಚು ವೆಚ್ಚವನ್ನು ನೀಗಿಸುತ್ತಿದ್ದವು ಎಂದು ಹೇಳಬಹುದಾಗಿದೆ.

ಈ ಹಿನ್ನೆಲೆಯಲ್ಲಿ ವಿದ್ಯೆ ಕಲಿಯುವ ವಿದ್ಯಾರ್ಥಿಗಳು ಬೆರಳಣಿಕೆಯಷ್ಟು ಎಂದು ಅನೇಕ ಆಧಾರಗಳಲ್ಲಿ ನೋಡಬಹುದು. ಅಂದು ಆಯಾ ವರ್ಗಗಳು ಅದೇ ವೃತ್ತಿಯನ್ನು ಕಡ್ಡಾಯವಾಗಿ ಅಳವಡಿಸಿಕೊಂಡು ಅದರ ಜೊತೆಗೆ ವಿದ್ಯೆಯನ್ನು ಕಲಿಯಲು ಅವಕಾಶವಿತ್ತು. ಮಾದರ ಚೆನ್ನಯ್ಯ, ಮಡಿವಾಳ ಮಾಚಯ್ಯ, ಡೊಹಾರ ಕಕ್ಕಯ್ಯ, ಜೇಡರ ದಾಸಿಮಯ್ಯ, ಆಯ್ದಕ್ಕಿ ಲಕ್ಕವ್ವ, ಆಯ್ದಕ್ಕಿ ಮಾರಯ್ಯ, ಅಂಬಿಗರ ಚೌಡಯ್ಯ ಇವರು ತಮ್ಮ ವೃತ್ತಿಯೊಂದಿಗೆ ಕಾಯಕವೇ ಕೈಲಾಸ ಎಂದು ನಂಬಿಕೊಂಡು ಮುಕ್ತಿಯನ್ನು ಪಡೆದುಕೊಂಡಿರುವುದನ್ನು ನೋಡಬಹುದಾಗಿದೆ.

### ಕೊನೆ ಟಿಪ್ಪಣಿಗಳು


೧. ವಿ.ಎಸ್.ಬಡಿಗೇರ, **ಕನ್ನಡ ಹಸ್ತಪ್ರತಿಗಳು ಬಹುಪಠ್ಯೀಯ ನೆಲೆಗಳು,** ಪು.೭೭, ೨೦೦೭

೨. ಬಿ.ವಿ.ವೀರಭದ್ರಪ್ಪ(ಸಂ), **ದೇವರನ್ನು ಕುರಿತು ಒಂದು ಬಹುಮುಖಿ ನೋಟ,** ಪು.೨೯೯, ೨೦೦೫

೩. ತಂಬಂಡ ವಿಜಯ ಪುಣಚ್ಚ, **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪ ಚರಿತ್ರೆ,** ಪು.೧೦೭, ೨೦೦೧

೪. ಪ್ರೊ.ಬಿ.ವಿ.ವೀರಭದ್ರಪ್ಪ(ಸಂ), **ದೇವರನ್ನು ಕುರಿತು ಒಂದು ಬಹುಮುಖಿ ನೋಟ,** ಪು.೨೬೦, ೨೦೦೫

೫. ಅದೇ, ಪು.೨೬೧ ೨೬೨, ೨೦೦೫

೬. ಅದೇ, ಪು.೨೪೫, ೨೦೦೫

೭. ಅದೇ, ಪು.೨೪೬, ೨೦೦೫

೮. ಅದೇ, ಪು.೯, ೨೦೦೫

೯. ಡಾ.ಜಿ.ರಾಮಕೃಷ್ಣ(ಸಂ), **ವೈಜ್ಞಾನಿಕ ಮನೋಧರ್ಮ,** ಪು.೧೭, ೨೦೦೫

೧೦. ಬಿ.ವಿ.ವೀರಭದ್ರಪ್ಪ (ಸಂ), **ದೇವರನ್ನು ಕುರಿತು ಒಂದು ಬಹುಮುಖಿ ನೋಟ,** ಪು.೨೩೪, ೨೦೦೫

೧೧. ವಿ.ಎಸ್.ಬಡಿಗೇರ, **ಅಡಿಗಲ್ಲು,** ಪು.೬೧, ೧೯೯೭

೧೨. ಅದೇ, ಪು.೨೬೭, ೨೦೦೫

೧೩. ಮಾಸ್ತಿ ವೆಂಕಟೇಶ ಅಯ್ಯಂಗಾರ, **ಧರ್ಮ ಸಂರಕ್ಷಣೆ,** ಪು.೨೩೪, ೨೦೦೫

೧೪. ಎ.ಎನ್.ಮೂರ್ತಿರಾವ್, **ದೇವರು,** ಪು.೧೪, ೧೯೯೬

೧೫. ಎಂ.ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.೨೨೬, ೨೦೦೨

೧೬. ಅದೇ, ಪು.೨೨೬, ೨೦೦೨

೧೭. ಅದೇ, ಪು.೨೩೦, ೨೦೦೨

□□□

ಮೂರು

# ಲಿಪಿ, ಭಾಷೆ, ಬರವಣಿಗೆ ಹಾಗೂ ದೈವೀನೆಲೆಗಳು

ಲಿಪಿ, ಭಾಷೆ, ಬರವಣಿಗೆ ಒಂದನ್ನೊಂದು ಆಶ್ರಯಿಸಿಕೊಂಡಿವೆ. ಭಾಷೆ ದೈವದತ್ತವಾದುದು. ಲಿಪಿಯೂ ದೈವದತ್ತವಾದುದು ಎಂಬ ನಂಬಿಕೆಯಿದೆ. ಬರವಣಿಗೆಯನ್ನು ಮಾನವನು ಚಿತ್ರಗಳ ಮೂಲಕ ಕಂಡುಕೊಂಡಿದ್ದಾನೆ. ಇವೆಲ್ಲವುಗಳು ಒಂದೇ ಪಥದಲ್ಲಿ ಚಲಿಸಿ ಕಾರ್ಯ ನಿರ್ವಹಿಸುತ್ತವೆ. ಸಾಹಿತ್ಯ ನೀರಿನಂತೆ ಹರಿಯುತ್ತ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಬೇಕಾದರೆ ಮೂಲ ಕಾರಣ ಲಿಪಿ, ಭಾಷೆ ಮತ್ತು ಬರವಣಿಗೆ ಎಂದು ಸ್ಪಷ್ಟವಾಗಿ ಹೇಳಬಹುದು. ಲಿಪಿಗಳಿಂದ ನಿರ್ಜೀವ ಹೊಂದಿರುವ ಅವಶೇಷಗಳು ಈ ಬರವಣಿಗೆಯಿಂದ ಎದ್ದು ನಿಂತು ನಮ್ಮೊಂದಿಗೆ ಸಂವಾದಿಸುವಲ್ಲಿ ತಾಳೆಗರಿಗಳಂಥ ಬರವಣಿಗೆಗಳೇ ಸಾಕ್ಷಿಯಾಗಿವೆ.

ಈ ಬರವಣಿಗೆಯನ್ನು ಆರಂಭದಲ್ಲಿ ತೊಗಟೆ, ಚರ್ಮ, ಮಡಿಕೆ, ದಂತ, ಬಟ್ಟೆ, ಲೋಹ, ಕಟ್ಟಿಗೆ, ಎಲೆ, ಕಾಗದ ಮತ್ತು ಕಲ್ಲುಗಳ ಮೇಲೆ ಬರೆಯುತ್ತಿದ್ದರು. ಮೊದಲಿಗೆ ಮರಳಿನ ಮೇಲೆ ಚರ್ಮದ ಮೇಲೆ ಅಕ್ಷರಗಳನ್ನು ಬರೆಯುವ ಅಭ್ಯಾಸ ಮಾಡಿಕೊಂಡಿದ್ದರು. ಇದು ದೀರ್ಘಕಾಲದವರೆಗೆ ಉಳಿಯಲಿಲ್ಲ. ತದನಂತರ ತಾಳೆಗರಿಗಳಲ್ಲಿ ಅಕ್ಷರಗಳನ್ನು ಬರೆದರೆ ಶಾಶ್ವತವಾಗಿ ಉಳಿಯಬಹುದೇನೋ ಎಂಬ ನಂಬಿಕೆಯ ಆಧಾರದ ಮೇಲೆ ಬರವಣಿಗೆ ಪ್ರಾರಂಭಿಸಿದರು. ತಾಳೆಗರಿ ಮೇಲೆ ಬರೆಯುವುದು ಅಕ್ಷರ ಹಾಗೂ ಆಯುಷ್ಯ ಹೆಚ್ಚುತ್ತದೆಂಬ ನಂಬಿಕೆ ಇತ್ತು. ಅಂದಿನ ತಾಳೆಗರಿಗಳು ಪಾರಂಪರಿಕ ಸನ್ನಿವೇಶಗಳನ್ನೇ ಕಣ್ಣಿಗೆ ಕಟ್ಟುವಂತೆ ಇಂದಿಗೂ ನೋಡಲು ಕಾಣುತ್ತವೆ.

ಲಿಪಿ, ಭಾಷೆಗಳನ್ನು ನೇರವಾಗಿ ಸಾರ್ವಜನಿಕರಿಗೆ ತಿಳಿಸಲು ಈ ಬರವಣಿಗೆ ಅತ್ಯಂತ ಮಹತ್ವವಾಗಿದೆ. ಇಂದಿನ ಕೆಲವೊಂದು ಕಛೇರಿಗಳಲ್ಲಿ ಮಾತುಗಳಿಗೆ ಪ್ರಾಮುಖ್ಯತೆ ನೀಡುವುದಿಲ್ಲ. ಇದೆಲ್ಲವು ಬಾಯಿಮಾತಿನ ಚಮತ್ಕಾರವಷ್ಟೇ ಆಗಿ ನಿಲ್ಲುತ್ತದೆ. ಅದನ್ನು ಮುಂದುವರಿಸಿಕೊಂಡು

ಹೋಗಬೇಕಾದರೆ ಅಲ್ಲಿ ಮಾತನಾಡಿದ ಎಲ್ಲ ವಿಷಯಗಳು ಲಿಖಿತ ರೂಪದಲ್ಲಿ ಬರಬೇಕಾಗುತ್ತದೆ. ಆದ್ದರಿಂದಲೇ ಮಾನವನಿಗೆ ಬರವಣಿಗೆ ಜೊತೆಗೆ ಒಂದು ಆತ್ಮೀಯ ಸಂಬಂಧ ಗಾಢವಾಗಿ ಬೆಳೆದಿರುವುದನ್ನು ಹಿಂದಿನ ದಿನಗಳಿಂದಲೂ ನೋಡಬಹುದು.

**ಲಿಪಿ :**

ಸಮಾಜದಲ್ಲಿ ನಿತ್ಯ ಚಲನಶೀಲಗೊಳ್ಳುತ್ತಿರುವ ವ್ಯವಹರಿಸಬಹುದಾದ ಸಂಭಾಷಣೆಗಳೇ ಲಿಪಿ. ಭಾಷೆ ಸಂಸ್ಕೃತಿ ರೂಪಗೊಳ್ಳುವ ಹಾಗೂ ನಾಶವಾಗುವುದರಲ್ಲಿ ಪ್ರಮುಖವಾಗಿದೆ. ಒಂದು ಪಕ್ಷ ಇನ್ನೊಂದು ಪಕ್ಷವನ್ನು ಸಹಿಸುವುದಿಲ್ಲ. ಇಬ್ಬರಲ್ಲಿಯೂ ರಾಜಕೀಯ ಹಿತಾಸಕ್ತಿಗಳು ಒಳಗೊಂಡಿರುತ್ತವೆ. ಒಬ್ಬರು ಒಂದನ್ನು ಮಾಡಿದರೆ ಅದಕ್ಕೆ ಪ್ರತಿವಿರೋಧಿಗಳು ಬೇಡ ಎನ್ನುವವರೂ ಇರುತ್ತಾರೆ. ಇಂತಹ ರಾಜಕೀಯತೆಯಲ್ಲಿ ಏಳು ಬೀಳುಗಳು ಸಹಜ. ಇಂಥ ಸ್ವ-ಹಿತಾಶಕ್ತಿ ಪ್ರಧಾನವಾದ ಧೋರಣೆಗಳು ನಿರ್ದಿಷ್ಠ ಲಿಪಿ, ಭಾಷೆ, ಸಂಸ್ಕೃತಿಯನ್ನೇ ಶ್ರೇಷ್ಠವೆಂದು ಮಂಡಿಸುತ್ತವೆ. ಜನ ಸಮೂಹಗಳು ತಲೆಬಾಗುತ್ತವೆ. ಇದರ ಹಿಂದಿರುವ ಸಾಂಸ್ಕೃತಿಕ ರಾಜಕಾರಣದ ನೆಲೆಗಳು ಪ್ರಮುಖವಾಗುತ್ತವೆ.

ಲಿಪಿಯು ಸಾಹಿತ್ಯಿಕ, ಧಾರ್ಮಿಕ, ಭಾವನಾತ್ಮಕ ಮತ್ತು ರಚನಾತ್ಮಕವಾದುದು ಮತ್ತು ಪರಿಚಲನೆಗೊಳ್ಳುವಂತದ್ದು. ಲಿಪಿ ಬೆಳೆಯುತ್ತ ಹೋದಂತೆಲ್ಲ ಬರವಣಿಗೆ ಸಾರ್ವಜನಿಕರಲ್ಲಿ ತನ್ನ ಪ್ರಭುತ್ವ ಸಾಧಿಸಲು ಪ್ರಮುಖವಾಯಿತು. ಸಂಸ್ಕೃತಿಯು ಏಳು ಬೀಳುಗಳನ್ನು ಗಟ್ಟಿಗೊಳಿಸಿ, ಮಾನವನಲ್ಲಿಯ ಸಹಜ ಗುಣಧರ್ಮಗಳನ್ನು ಇನ್ನೊಬ್ಬರಿಗೆ ನೇರವಾಗಿ ತಿಳಿಸಿಕೊಡಲು ಭಾಷೆ ಮತ್ತು ಬರವಣಿಗೆಗಳು ಪ್ರಚುರವಾದಷ್ಟು ಸಾಹಿತ್ಯ ಸೃಜನಶೀಲತೆಯನ್ನು ಪ್ರಚುರಪಡಿಸಲು ಲಿಪಿ ಕಾರಣವಾಯಿತು. ಲಿಪಿ ನೇರವಾಗಿ ಮನಸ್ಸಿನಲ್ಲಿಯ ದುಗುಡವನ್ನು ಹೊರಸೂಸುವಂತೆ ಮಾಡುತ್ತದೆ. ಇದು ಮೂರ್ತಸ್ವರೂಪವನ್ನು ಹೊಂದಿದೆ. ಅಮೂರ್ತ ಸ್ವರೂಪದಲ್ಲಿರುವ ವಿಷಯಗಳು, ಕಾಲ್ಪನಿಕ ಕಟ್ಟುಕತೆಗಳು, ಸಾಂಸ್ಕೃತಿಕ ಅಂಶಗಳು, ಧಾರ್ಮಿಕ ನೀತಿಗಳು, ಸತ್ಯ ಪ್ರಾಮಾಣಿಕತೆಗಳು ಇತ್ಯಾದಿಗಳೊಂದಿಗೆ ಕೈಯಲ್ಲಿ ಹಿಡಿದ ಕನ್ನಡಿಯಂತೆ ಸ್ಪಷ್ಟವಾಗಿ ತೋರಿಸಿಕೊಡಬಲ್ಲದು ಮತ್ತು ಮಾತನಾಡಲಾರದವರನ್ನು ನೇರವಾಗಿ ಮಾತನಾಡಿಸುವ ಪ್ರವೃತ್ತಿಯನ್ನು ಲಿಪಿ ಪಡೆದುಕೊಂಡಿದೆ.

ಲಿಪಿಯ ವಿನ್ಯಾಸ ಅಥವಾ ರಚನೆ ಎನ್ನುವುದೇ ಚರ ಸ್ವರೂಪದ್ದು ಹಾಗೂ ಸೃಜನಶೀಲ ಗುಣವುಳ್ಳದ್ದಾಗಿದೆ. ಒಂದೊಂದು ಕಾಲದಲ್ಲಿ ತನ್ನದೇ ರೀತಿಯಲ್ಲಿ ಬದಲಾಯಿಸುತ್ತಾ ಬಂದಿರುವುದನ್ನು ಇಂದಿಗೂ ಕಾಣಬಹುದಾಗಿದೆ. ಲಿಪಿ ಲಿಪಿಕಾರ ಆ ಸಂಸ್ಕೃತಿಯ ಸಂದರ್ಭ ಇವು ಪರಸ್ಪರ ನಿಕಟ ಸಂಬಂಧವನ್ನು ಹೊಂದಿರುವಂಥವು. ಪ್ರಯೋಗಶೀಲ ಮನಸ್ಸು ತನ್ನ ಕಾಲದ ಅಗತ್ಯಗಳಿಗೆ ತಕ್ಕಂತೆ ತನ್ನದೇ ಬದಲಾವಣೆಗಳನ್ನು ಬದಲಾಯಿಸುತ್ತಾ ಬರುವುದನ್ನು ಕಾಣಬಹುದು. ಲಿಪಿಯೊಂದರ ಹುಟ್ಟು ಅನೇಕ ಲೋಕಗ್ರಹಿಕೆಗಳ, ಅನುಭವಗಳ, ಪ್ರೇರಣೆಗಳ ಗೊನೆಯಾಗಿರುತ್ತದೆ. ಲಿಪಿಕಾರ ಮೂಲಕ್ಕೆ ನಿಷ್ಠನಾಗಿದ್ದರೂ ತನ್ನ ಹಿಂದಿನ ಕೃತಿಗಳಿಂದ ಪಡೆದಿದ್ದರೂ ತನ್ನದೇ ಆದ ಸೃಜನಶೀಲ ಮನಸ್ಸು

ಹೊರಗಿನಿಂದ ಪಡೆದದ್ದನ್ನು ಅರಗಿಸಿಕೊಂಡು ಹೊಸದನ್ನು ನಿರ್ಮಿತಿಗೊಳಿಸುತ್ತದೆ. ಇಲ್ಲಿ ಕವಿಗಿಂತ ಲಿಪಿಕಾರನ ಜಾಣ್ಮೆ ಮೆಚ್ಚುವಂಥದ್ದು.

ಲಿಪಿ ಹಾಗೂ ಭಾಷೆಯನ್ನು ಅತೀತವಾದ ಯಾವತ್ತೂ ಬದಲಾಗದ ಒಂದು ಮೂಲ ಭಾಷಿಕ ವ್ಯವಸ್ಥೆಯೆಂದು ತಿಳಿದುಕೊಂಡು ಬಂದಿದ್ದೇವೆ. ಲಿಪಿಕಾರ ಲಿಪಿಯನ್ನು ಬರೆಯುತ್ತಿರುವಾಗ ಮತ್ತು ಮುಕ್ತಾಯ ಗೊಳಿಸುತ್ತಿರುವಾಗ ತನ್ನ ಕುಲಗೋತ್ರಗಳನ್ನು ವ್ಯಕ್ತಪಡಿಸುತ್ತಿರುವಾಗ ಮತ್ತು ಪ್ರಭಾವಿ, ದೈವ, ಮತ್ತು ಗುರು ಪರಂಪರೆಯನ್ನು ಹೇಳುವಾಗ ತನ್ನ ಪ್ರಾದೇಶಿಕ ಕನ್ನಡವನ್ನು ಬಳಿಸಿದರೆ ಆ ಕೃತಿ ಪ್ರಾದೇಶಿಕ ಭಾಷೆಯನ್ನು ಒಳಗೊಂಡಿರುತ್ತದೆ. ಇಲ್ಲವಾದರೆ ತನ್ನ ಕಾಲದ ಭಾಷೆಯತ್ತ ಸೆಳೆದುಕೊಂಡು ಹೋಗಬಹುದು. ಈ ಅಂಶವನ್ನು ನೋಡಬೇಕಾದರೆ ದುರ್ಗಸಿಂಹ ಬರೆದಿರುವ ಪಂಚತಂತ್ರ ಹಸ್ತಪ್ರತಿಗಳಲ್ಲಿ ಭಾಷೆಯು ಕಥೆಯ ಸನ್ನಿವೇಶಗಳಿಗೆ ತಕ್ಕಂತೆ ಮೂಲವನ್ನು ಒಳಗೊಳ್ಳುವಂಥ ಅಂಶಗಳನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ.

ಲಿಪಿಕಾರನು 'ಬರಹ ಮತ್ತು ಭಾಷೆಯನ್ನು ದೈವೀಜ್ಞಾನಕ್ಕೆ ಸಂವಾದಿಯಾಗಿ ನಂಬಿಕೊಂಡು ಬಂದಿದ್ದನ್ನು ಕಾಣುತ್ತದೆ. ಜಗತ್ತಿನ ಹಲವಾರು ಸಂಪ್ರದಾಯಗಳಲ್ಲಿ ದೈವೀ ಜ್ಞಾನವೆಂಬುದು ಸಾಂಸ್ಕೃತಿಕ ಶಕ್ತಿಗಳನ್ನು ಅಧಿಕೃತಗೊಳಿಸುವ ಶಕ್ತಿಯೂ ಆಗಿರುತ್ತದೆ. ಆದರೆ ಸಂಸ್ಕೃತದ ಪರಂಪರೆಯಲ್ಲಿ ಮಾತ್ರ ಭಾಷೆಯು ತನ್ನನ್ನು ತಾನು ಎಲ್ಲಕ್ಕೂ ಅತೀತವಾದ ಯಾವತ್ತೂ ಬದಲಾಗದ ಒಂದು ಮೂಲ ಭಾಷಿಕ ವ್ಯವಸ್ಥೆಯೆಂದು ತಿಳಿದುಕೊಂಡು ಬಂದಿತ್ತು. ಮೂಲ ಭಾಷೆಗೆ ಸಾಪೇಕ್ಷವಾಗಿ ತನಗೂ ಇರುವ ಭಿನ್ನತೆಯನ್ನು ವ್ಯಾಖ್ಯಾನಿಸಿಕೊಳ್ಳುವ ಮೂಲಕ ತನ್ನ ಸ್ವಂತಿಕೆಯನ್ನು ಕಟ್ಟಿಕೊಳ್ಳಬೇಕೆಂದು ಈ ಸಂಪ್ರದಾಯವು ನಂಬುತ್ತದೆ. ಇಂಥ ಒಂದು ಪರಿಕಲ್ಪನಾತ್ಮಕ ಜಗತ್ತಿನಲ್ಲಿ ವ್ಯಾಕರಣ ಮತ್ತು ಭಾಷಾಶಾಸ್ತ್ರದ ವ್ಯವಸ್ಥೆಗೆ ಸಂಬಂಧಿಸಿದ ಎಲ್ಲ ಚಿಂತನೆಗಳೂ ಪೂರ್ವಸಿದ್ಧ ರೂಪದವು. ಇವು ಇತಿಹಾಸದ ಗತಿಯಿಂದ ವಿಚಲಿತಗೊಳ್ಳುವುದಿಲ್ಲ. ಅಂದರೆ ಈ ಚಿಂತನೆಗಳ ಪ್ರಕಾರ ಪ್ರಯೋಗ ಮತ್ತು ರೂಢಿಗಳು ಯಾವತ್ತು ತತ್ವಗಳನ್ನು ನಿರ್ಮಿಸುವುದಿಲ್ಲ. ಬದಲು ತತ್ವಗಳು ಪ್ರಯೋಗಕ್ಕೆ ಮೊದಲೇ ಸಿದ್ಧವಾಗಿರುವಂಥವು. ಆದ್ದರಿಂದ ಪ್ರಯೋಗಗಳಿಗೆ ತತ್ವಗಳನ್ನು ಅನುಸರಿಸುವುದು ಮಾತ್ರ ಸಾಧ್ಯ ಎಂದು ನಂಬಿಸುತ್ತದೆ'.[೧]

ಮಾನವನು ತನ್ನ ಸುತ್ತಲಿನ ವಸ್ತುಗಳನ್ನು ಆಲಿಸಿ, ವೀಕ್ಷಿಸಿಕೊಂಡು ಮಾತುಗಳನ್ನಾಡಲು ಪ್ರಾರಂಭಿಸತೊಡಗಿದ. ಈ ಮಾತು ತನ್ನದೇ ಆದ ಭಾವನೆಗಳನ್ನು ಅರ್ಥಮಾಡಿಕೊಂಡು ಸಂಪರ್ಕಿಸಲು ಅನುಕೂಲವಾಯಿತು. ಈ ಮಾತುಗಳನ್ನು ಬೇರೊಬ್ಬರಿಗೆ ಸ್ಪಷ್ಟವಾಗಿ ಆಧಾರ ರೂಪದಲ್ಲಿ ತಿಳಿಸಿಕೊಡುವುದೇ ಲಿಪಿಯಾಗಿ ಬಳಸಿಕೊಂಡನು. ಚಿತ್ರಲಿಪಿಯೇ ಬರುಬರುತ್ತಾ ಅಕ್ಷರ ಲಿಪಿಯಾಗಿ ಬೆಳೆದು ಬಂದಿತೆಂದು ಭಾಷಾತಜ್ಞರು ಅಂದಾಜಿಸಿದ್ದಾರೆ. ಮಾತು ಕಿವಿಗೆ, ಲಿಪಿ ಕಣ್ಣಿಗೆ ಮತ್ತು ಭಾಷೆ ಬರವಣಿಗೆಗೆ ಸಂಬಂಧಿಸಿದ್ದಾಗಿದೆ. ಇಲ್ಲಿ ಈ ಮೂರು ಒಂದಕ್ಕೊಂದು ಸರಪಳಿಯಂತೆ ಕೂಡಿಕೊಂಡು ಒಂದೇ ಅಭಿಮುಖವಾಗಿ ಗ್ರಂಥರೂಪವಾಗಲು ಮೂಲ ಕಾರಣವಾಗಿದೆ. ಈ ಲಿಪಿಯು ಮೊದಲು ಪ್ರಾರಂಭವಾಗಿರುವ ನಿಖರವಾದ ಮಾಹಿತಿ ತಿಳಿಯದೇ ಉಳಿದುಕೊಂಡಿದೆ. ಲಿಪಿ ಕಾಲಾಂತರದಲ್ಲಿ

ಬೆಳೆಯುತ್ತಾ ಬಂದಂತೆ ತನ್ನದೇ ಆದ ರೂಪದಲ್ಲಿ ವಿಸ್ತರಿಸುತ್ತಾ ಬಂದಿದೆ. ಅಕ್ಷರಲಿಪಿ ಬೆಳವಣಿಗೆಯಲ್ಲಿ ಚಿತ್ರಲಿಪಿ, ಭಾವಲಿಪಿ, ಪದಸೂಚಕ ಲಿಪಿ ಮತ್ತು ಏಕ ಶಬ್ದಾತ್ಮಕ ವರ್ಣಲಿಪಿಗಳು ಎಂದು ವಿವಿಧ ಹಂತಗಳನ್ನು ಗುರುತಿಸಿದ್ದಾರೆ.

ಅಶೋಕನ ಕಾಲದಿಂದ ಬ್ರಾಹ್ಮಿ ಹಾಗೂ ಖರೋಷ್ಠಿ ಲಿಪಿಗಳು ಬಳಕೆಗೆ ಬಂದಿವೆ. ಈ ಬ್ರಾಹ್ಮಿಯಲ್ಲಿ ಉತ್ತರ ಲಿಪಿಯಿಂದ ದೇವನಾಗರಿ, ಬಂಗಾಳಿ, ಶಾರದಾ ಲಿಪಿಗಳಿವೆ. ದಕ್ಷಿಣ ಲಿಪಿಯಿಂದ ಕನ್ನಡ, ತೆಲುಗು, ಗ್ರಂಥಲಿಪಿ, ತಮಿಳು ಲಿಪಿಗಳೂ ಬಂದಿವೆ. ಕ್ರಿ.ಪೂ.೮೦೦ರಲ್ಲಿ ಪಾಣಿನಿಯ 'ಅಷ್ಟಾಧ್ಯಾಯಿ' ಎಂಬ ಕೃತಿಯಲ್ಲಿ ಮೊಟ್ಟಮೊದಲಬಾರಿಗೆ 'ಲಿಪಿ' ಅಥವಾ 'ಲಿಬಿ' ಎಂಬ ಶಬ್ದದ ಬಳಕೆಯಾಗಿದೆ. ಪ್ರಾಕೃತ–ಸಂಸ್ಕೃತ ಮಿಶ್ರಭಾಷೆಯ ಸುಪ್ರಸಿದ್ಧ ಧವಲಾ ಜಯಧವಲಾ ಮತ್ತು ಮಹಾದವಲ ಇವು ವೀರಸೇನನ ಕೃತಿಗಳು ಕನ್ನಡ ಲಿಪಿಯಲ್ಲಿರುವುದು ಗಮನಿಸಬಹುದು. ಮತ್ತು ತಿಗಳಾರಿಲಿಪಿ, ಮೋಡಿಲಿಪಿ, ಗ್ರಂಥಲಿಪಿ, ನಂದಿನಾಗರಿಲಿಪಿ, ಮಲಿಯಾಳಿ ಲಿಪಿ, ಸಂಸ್ಕೃತ ಲಿಪಿ, ತೆಲುಗು ಲಿಪಿ, ಅರವಲಿಪಿ ಇತ್ಯಾದಿ. ಇವುಗಳಲ್ಲಿ ತಿಗಳಾರಿ ಲಿಪಿಯನ್ನು ಉದಾಹರಿಸಬಹುದಾಗಿದೆ. ಕನ್ನಡ ಹಸ್ತಪ್ರತಿಗಳಲ್ಲಿ ತಿಗಳಾರಿಯೆಂಬುದು ತಿಗಳು+ಅರಿ ಎಂಬವುಗಳ ಸಮಸ್ತ ರೂಪವಾಗಿದೆ. ಇದರ ನಿಜರೂಪ ತಮಿಳು ಆರ್ಯ. ಪ್ರಾಚೀನ ಕಾಲದಲ್ಲಿ ತಮಿಳರನ್ನು ತಿಗುಳರೆಂದೇ ಕರೆಯುತ್ತಿದ್ದರು. ಈ ಭಾಷೆ ಬೇರೊಬ್ಬರಿಗೆ ತಿಳಿಯದ ಭಾಷೆಯಾಗಿತ್ತು. ಇಂತಹ ತಾಳೆಗರಿಗಳು ಅವರಿಟ್ಟುಕೊಂಡ ಭಾವನೆಗಳನ್ನು ಆದರ್ಶಗಳನ್ನು ಪ್ರತಿಪಾದಿಸುತ್ತವೆ. ಆದ್ದರಿಂದಲೇ ದೈವೀ ಸ್ವರೂಪವೆಂಬಂತೆ, ಪರಂಪರೆಯ ಆಸ್ತಿಯೆಂದು, ಮಹತ್ವವನ್ನು ನೀಡಿರುವುದು ಕಂಡುಬರುತ್ತದೆ. ತಿಗಳಾರಿಲಿಪಿಯ ಹಸ್ತಪ್ರತಿಗಳಲ್ಲಿ ವೇದಗಳು, ಪುರಾಣಗಳು, ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಭಾಗವತಗಳು, ಆಯುರ್ವೇದ, ಜ್ಯೋತಿಷ್ಯ, ಯೋಗಶಾಸ್ತ್ರ, ತರ್ಕಶಾಸ್ತ್ರ, ಮಂತ್ರವಿದ್ಯೆ, ವೈದ್ಯ, ಸಂಗೀತಶಾಸ್ತ್ರದಂತಹ ಇಂತಹ ಹಲವಾರು ವಿಷಯಗಳನ್ನು ಬರೆದಿದ್ದನ್ನು ಕಾಣಬಹುದು. ಹೆಚ್ಚಾಗಿ ಇಂತಹ ಲಿಪಿಗಳಲ್ಲಿ ದೊರೆಯುವ ವಿಷಯಗಳೆಂದರೆ ಮಂತ್ರ, ತಂತ್ರ, ವಿದ್ಯೆ ಮತ್ತು ತರ್ಕಶಾಸ್ತ್ರಗಳಂಥ ಕೃತಿಗಳು ಇಂತಹ ಭಾಷೆಗಳಲ್ಲಿ ಬರೆದರೆ ಯಾರಿಗೂ ತಿಳಿಯದೇ ಗೌಪ್ಯವಾಗಿಡಲು ಸಾಧ್ಯವಾಗುತ್ತದೆ. ಅಲ್ಲದೆ ಒಂದು ದೃಷ್ಟಿಯಿಂದ ವೇದ ಪುರಾಣಗಳು ಶಾಸ್ತ್ರಗಳೂ ಜನಸಾಮಾನ್ಯರ ಕೈಯಲ್ಲಿ ಸಿಕ್ಕು ನಶಿಸಬಾರದೆಂದು ಇಂತಹ ಲಿಪಿಯಲ್ಲಿ ಬರೆದಿಡಲಾಯಿತು. ಭಾರತದಲ್ಲಿ ಪ್ರಚಲಿತವಿದ್ದ ಸಿಂಧೂಲಿಪಿ, ಬ್ರಾಹ್ಮಿಲಿಪಿ ಮತ್ತು ಖರೋಷ್ಠಿ ಲಿಪಿಗಳಲ್ಲದೆ ಪ್ರಪಂಚದ ಇತರೆ ಲಿಪಿಗಳಾದ ಹೈರೋಗ್ಲಿಫಿಕ್, ಕ್ಯೂನಿಫಾರಂ, ಗ್ರೀಕ್, ಸೆಮಿಟಿಕ್, ಫಿನಿಶಿಯನ್ ಮುಂತಾದ ಇತರ ಲಿಪಿಗಳೊಡನೆ ಸಹಸಂಬಂಧ ಹೊಂದಿದ್ದವು ಎಂಬುದನ್ನು ವಿದ್ವಾಂಸರು ಗುರುತಿಸಲು ಪ್ರಯತ್ನಿಸಿದ್ದಾರೆ. ಚರಿತ್ರೆಯ ಪುಟಗಳಲ್ಲಿ ನೋಡಿದರೆ ಅಶೋಕನ ಲಿಪಿಯನ್ನು ಅವನು ಹೊರಡಿಸಿದ ನಾಣ್ಯಗಳ ಮೇಲಿನ ಬರಹಗಳಿಂದ ಬ್ರಾಹ್ಮಿಲಿಪಿ ಎಂದು ಗುರುತಿಸಲಾಯಿತು. ಅಲ್ಲಿಂದಲೇ ಲಿಪಿಗಳು ಅಲ್ಲಲ್ಲಿ ಕಾಣಿಸಿಕೊಂಡವು. 'ಸಿಂಧೂ ನಾಗರೀಕತೆಯ ಫಲಕಗಳ ಮೇಲಿನ ಲಿಪಿಗಳನ್ನು ಓದಲು ನೂರಾರು ವರ್ಷಗಳಿಂದಲೂ ಪ್ರಯತ್ನಿಸಿದರೂ ಸಹ ಇಂದಿಗೂ ಅದು ಯಶಸ್ವಿಯಾಗದೆ ಕತ್ತಲಲ್ಲೇ

ಉಳಿದಿದೆ. ಎಲ್ಲ ವಿದ್ವಾಂಸರು ಒಪ್ಪಿಕೊಳ್ಳುವಂತೆ ಸಮರ್ಪಕವಾಗಿ ಓದಿ ಅರ್ಥೈಸಲು ಸಾಧ್ಯವಾಗಿಲ್ಲ.[೨] ಇಂಥ ಲಿಪಿಗಳು ಇನ್ನೆಷ್ಟು ನಿಗೂಢವಾಗಿವೆಯೋ ತಿಳಿಯದು.

ಅಶೋಕನ ಕಾಲದಲ್ಲಿ ರಾಜ್ಯದ ಸಂಪತ್ತು ಎಲ್ಲಾ ರೀತಿಯಿಂದಲೂ ಸುಖಕರವಾಗಿತ್ತು. ಆದರೆ ಅಕ್ಷರ ಜ್ಞಾನ ಹೇಳಿಕೊಳ್ಳುವಂತೆ ಇರಲ್ಲಿ ಆ ಕಾಲದಲ್ಲಿ ಲಿಪಿ ಜ್ಞಾನ ತೀರಾ ಕಡಿಮೆಯಿದ್ದು ಆತ ಕಂಡುಕೊಂಡ ಉಪಾಯವೆಂದರೆ 'ತಾನು ಬರೆಸಿದ ಶಾಸನಗಳ ಅರ್ಥವನ್ನು ನಿರ್ದಿಷ್ಟ ದಿನದಂದು ಮಹಾಮಾತ್ರರು ಅಲ್ಲಿ ಸೇರಿದ ಜನಗಳಿಗೆ ಓದಿ ವಿವರಿಸಬೇಕಿತ್ತು. ಲಿಪಿಯ ಬಳಕೆ ಹೆಚ್ಚಿರುವ ಇಂದಿನ ಕಾಲದಲ್ಲಿ ಅನೇಕ ಯತಿಗಳ, ಸಾಧುಗಳ ಮಾತುಗಳನ್ನು ಕೇಳಲು ಜನ ತಂಡೋಪತಂಡಗಳಾಗಿ ನೆರೆಯುವುದನ್ನು ನಾವು ಕಾಣುತ್ತೇವೆ. ಆ ಸಂತರ ಮಾತುಗಳನ್ನು ಪುಸ್ತಕದಲ್ಲಿ ಮುದ್ರಿಸಿದ್ದರೂ ಅದನ್ನೇ ಓದಬಹುದಲ್ಲ. ಭಾಷಣ ಏಕೆ ಕೇಳಬೇಕು.[೩] ಎಂಬ. ವಿಚಾರಗಳನ್ನು ಕೇಳುವುದು, ಓದುವುದಕ್ಕಿಂತಲೂ ಗಮನಿಸುವುದರ ಕಡೆಗೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದೇವೆ. ಇದನ್ನೆಲ್ಲ ಬಿಟ್ಟು ಹೊಸ ಚೈತನ್ಯದತ್ತ ಸಾಗಬೇಕು. ಲಿಪಿ ಬರವಣಿಗೆಗೆ ಹೆಚ್ಚು ಗಮನ ನೀಡಬೇಕು. ಎಲ್ಲರೂ ಆ ಶಿಕ್ಷಣದಿಂದ ಮುಕ್ತರಾಗಬೇಕು, ಸ್ವ-ಕಲಿಕೆಗೆ ಪ್ರೇರಕರಾಗಬೇಕು. ಅಲ್ಲದೆ ಪ್ರೋತ್ಸಾಹಿಸಬೇಕು ಎಂಬುದನ್ನು ಅಶೋಕನ ಶಾಸನಗಳಲ್ಲಿ ಇಂತಹ ಮಾಹಿತಿಗಳು ದೊರೆತಿರುವುದು ಕಂಡುಬಂದಿದೆ. ಇಂದಿನ ದಿನಕ್ಕಿಂತಲೂ ಹೆಚ್ಚಾಗಿ ಅನಕ್ಷರತೆಯನ್ನು ಅಂದು ಹೊಂದಿತ್ತು. ಆದ್ದರಿಂದಲೇ ಇಂತಹ ಉಕ್ತಿಗಳು ಕಂಡುಬಂದಿರುವುದು ಸಹಜವಾಗಿದೆ.

ಧಾರ್ಮಿಕ ಒತ್ತಡಗಳು ಲಿಪಿಕಾರರಿಗೆ ಕೆಲವೊಂದು ಅಡ್ಡಿ ಆತಂಕಗಳನ್ನು ತಂದೊಡ್ಡಿದವು. ಅಕ್ಷರ ಬರೆಯುವುದು ಕೆಳವರ್ಗದವರಿಗೆ ಸೀಮಿತ, ಅವರು ಜ್ಞಾನಾಸಕ್ತರಲ್ಲ, ನಮ್ಮ ಕಾರ್ಯಗಳಿಗೆ ಸಹಾಯ ಹಸ್ತರಾಗಿರಬೇಕು, ಬೌದ್ಧಿಕತೆಯೇ ಮೇಲಾದದ್ದು, ಇವರು ಹೇಳಿದ ವಿಚಾರಗಳನ್ನು ಲಿಪಿ ರೂಪದಲ್ಲಿ ಬರೆಯುತ್ತಿರಬೇಕು ಎಂಬುದು ಅಂದಿನ ದಿನದಲ್ಲಿ ಕಡ್ಡಾಯವಾಗಿತ್ತು. ಹಸ್ತಪ್ರತಿಯ ಲಿಪಿಕಾರರನ್ನು ಕಡೆಗಣಿಸಿದ್ದನ್ನು ಕಾಣುತ್ತೇವೆ. ಲಿಪಿಕರಣ ಕೂಡ ಸಂಗ್ರಹ, ಸಂರಕ್ಷಣೆಯ ಭಾಗವಾಗಿತ್ತು. ವೈದಿಕರಲ್ಲಿ ಲಿಪಿ ತಮಗಷ್ಟೇ ಸೀಮಿತ ಬೇರೊಬ್ಬರಿಗೆ ಸಲ್ಲಬಾರದು ಎನ್ನುವ ಭಾವನೆ ಅಂದು ಬೇರೂರಿದ್ದು ಕಂಡು ಬರುತ್ತದೆ. 'ವೇದಗಳನ್ನು ಬರೆದಿಡುವವರು ನರಕಕ್ಕೆ ಹೋಗುತ್ತಾರೆ' ಎನ್ನುವ ಮಹಾಭಾರತದಲ್ಲಿನ ವಿವರವು ವ್ಯವಸ್ಥಿತವಾಗಿ ಕೆಳವರ್ಗಗಳನ್ನು ಅಕ್ಷರದಿಂದ ದೂಡ ಇಡುವ ಸಂಗತಿಯೇ ಆಗಿದೆ. ಸ್ವರ್ಗ, ನರಕ, ಪಾಪ-ಪುಣ್ಯಗಳಂತಹ ಬ್ರಮಾತ್ಮಕ ಕಲ್ಪನೆಗಳನ್ನು ಹರಿಯಬಿಟ್ಟು ಅವರ ಸಂಸ್ಕೃತಿಯನ್ನೇ ಮೂಲೆಗುಂಪು ಮಾಡಿದರು. ಇಲ್ಲಿ ಕಂಡುಬರುವ ಅಂಶವೆಂದರೆ ಅವರು ನಮ್ಮಂತೆ ಜ್ಞಾನಿಗಳಾದರೆ ನಮಗೆ ದಕ್ಕೆಯಾದೀತು? ಇವರು ಇಲ್ಲಿಯೇ ಇದ್ದರೆ ಇನ್ನೂ ನಾವು ಮುಂದುವರಿಯಬಹುದು ಎಂಬುದೇ ಅವರ ನಿಲುವುಗಳಾಗಿವೆ. ಇದು ಇನ್ನೂ ಅಲ್ಲಲ್ಲಿ ಜೀವಂತವಾಗಿ ಸುಳಿಯುತ್ತಿರುವುದನ್ನು ನೋಡುತ್ತಲೇ ಇದ್ದೇವೆ. ಇದನ್ನು ಅಳಿಸಬೇಕಾದರೆ ಎಲ್ಲರೂ ಅಕ್ಷರಸ್ಥರಾಗಿ, ಉನ್ನತವಾಗಿ ಆಲೋಚನೆ ಮಾಡುವ ಸ್ವಾವಲಂಬಿಗಳಾಗಿ ಸ್ವತಃ ಪ್ರಗತಿಯನ್ನು ಸಾಧಿಸಬೇಕು. ಲಿಪಿಕಾರರೆಂದರೆ ಅವರು ಸೃಜನಶೀಲ ಬರಹಗಾರರು. ಭಾಷೆಗೆ ಚಲನಶೀಲತೆಯನ್ನು ತಂದುಕೊಟ್ಟವರು. ಬರೆದಿರುವ ಬರವಣಿಗೆ ಇಂದಿಗೂ

ಅಮರ. ಮಹಾನ್ ಪಂಡಿತರೂ, ವಿಭುದರ ಸಾಲಿನಲ್ಲಿ ಇವರೂ ಒಬ್ಬರಾಗಿದ್ದರು. ಕವಿ ಅಥವಾ ವಿದ್ವಾಂಸರು ಬರೆದುಕೊಟ್ಟಿದ್ದನ್ನು ತೀಡುವವರಲ್ಲ ಕ್ರಿಯಾಶೀಲರಾಗಿ ಲಿಪಿಗೈಯುವವರು ಅವರಿಗೂ ಸ್ವತಂತ್ರ ಆಲೋಚನೆ, ಅಭಿವ್ಯಕ್ತಿ, ಕ್ರಮಗಳಿದ್ದವು ಎಂಬುದನ್ನು ಮರೆಯವಂತಿಲ್ಲ. 'ಕವಿ ವೀರನಾರಾಯಣ ನಾನು ಲಿಪಿಕಾರ ಎನ್ನುವ ಕುಮಾರವ್ಯಾಸನಾಗಲೀ, ಪ್ರತಿ ನೋಡಿ ಬರೆದೆ, ಲಪಿಗೈದೆ ಎನ್ನುವ ಹಲವಾರು ಪ್ರತಿಕಾರ ಮಾತಾಗಲಿ ಕಂಗಳು ಜಿಹ್ವೆ ಕರಕರ್ಣಂಗಳು ಗತಿಮತಿ ಚೈತನ್ಯಕ್ಕೆ ಸಮಸ್ತೆ ಸದ್ಭಕ್ತ ವೀರ ಮಾಹೇಶ್ವರರುಗಳೇ ಕರ್ತರು'.[೪] ಎನ್ನುವ ಲಿಪಿಕಾರರು ನಾನು ಎಂಬುದನ್ನು ಎಲ್ಲಿಯೂ ಬರೆದುಕೊಂಡಿಲ್ಲ. ತಮ್ಮ ಪರಿಪೂರ್ಣವಾದ ಹೆಸರನ್ನು ನಿಖರವಾಗಿ ತಿಳಿಸಿಕೊಟ್ಟಿಲ್ಲ, ಒಟ್ಟಾರೆ ತಮ್ಮ ಕುಲಗೋತ್ರಗಳು, ತಮ್ಮ ಆರಾಧ್ಯ ದೈವವಾದ ಗುರುವಿನ ಹೆಸರುಗಳಿಂದಲೇ ಬಹಳಷ್ಟು ತಾಳೆಗರಿಗಳು ಬರೆದಿದ್ದನ್ನು ನೋಡಬಹುದು. ತಮ್ಮ ತನು ಮನ ಧನಗಳೆಲ್ಲವನ್ನು ಕಣ್ಣು, ನಾಲಿಗೆ, ಕೈಗಳು, ತಮ್ಮ ಬುದ್ಧಿಯನ್ನೆಲ್ಲ ದೇವರಿಗೆ ಅರ್ಪಿಸಿ ಕೃತಿಗೈದೆನೆಂದು ಎದೆತಟ್ಟಿ ಹೇಳಿರುವ ಉಕ್ತಿಗಳು ಬರೆದಿರುವ ಕೃತಿಗಳಲ್ಲಿ ಕಾಣಬಹುದು. ಬುದ್ಧಿಭಾವಗಳನ್ನು ಭಿನ್ನವಾಗಿ ನೋಡಿರುವುದನ್ನು ಕಾಣುತ್ತೇವೆ. ಕಾವ್ಯವಾಚನವನ್ನು ಹೇಳುವ ಬುದ್ಧಿಜೀವಿಗಳು ಶ್ರೇಷ್ಠರು. ಬರೆಯುವವರು ಕನಿಷ್ಠರು, ಅಧಮರು ಕೀಳುಜಾತಿಯವರು ಎಂಬುದು ಪ್ರಚಲಿತವಾಗಿತ್ತು. ಇವರು ಹೇಳಿದ ಕಾರ್ಯವನ್ನು ನಡೆಸಿಕೊಡುವುದಷ್ಟಕ್ಕೇ ಸೀಮಿತರು ಎಂದೆಲ್ಲ ವ್ಯಾಖ್ಯಾನಿಸಲಾಗಿದೆ. ಇಂಥ ಜಡ ಅಂಶಗಳನ್ನು ಎಲ್ಲಿಯವರೆಗೆ ಹಿಡಿದುಕೊಂಡು ಮುನ್ನಡೆಯುತ್ತಾರೆಯೋ ಅವರು ಅದೇ ಮಾರ್ಗದಲ್ಲಿಯೆ ಇರುತ್ತಾರೆಂಬುದನ್ನು ಮರೆಯುವಂತಿಲ್ಲ.

ಲಿಪಿಯನ್ನು ದೈವೀಕರಿಸಿದ್ದು ಇಲ್ಲಿ ಗಮನಾರ್ಹ. 'ಬ್ರಾಹ್ಮಿಲಿಪಿ ಬ್ರಹ್ಮನಿಂದ ಹುಟ್ಟಿತೆಂದು ಹಿಂದೂಗಳು ಭಾವಿಸಿದರೆ, ತೀರ್ಥಂಕರನು ತನ್ನ ಮಗಳಾದ ಬ್ರಾಹ್ಮಿಗೆ ಕಲಿಸಿಕೊಟ್ಟಿದ್ದೇ ಬ್ರಾಹ್ಮಿಲಿಪಿ ಎಂಬುದು ಜೈನರ ಅಭಿಮತ. ಬ್ಯಾಬಿಲೋನಿಯನ್ನರು 'ನಬೂ' ಎಂಬ ದೇವತೆ ಲಿಪಿ ಕಂಡುಹಿಡಿದ ಎಂದು ನಂಬಿದ್ದರು. ಈ ದೇವತೆ ಉಳಿದ ದೇವತೆಗಳ ಲಿಪಿಕಾರ; ಮತ್ತು ಎಲ್ಲ ಶಾಸ್ತ್ರಗಳ ಆದಿದೈವ. ಈಜಿಪ್ಷಿಯನ್ನರು 'ಥಾತ್' ಎಂಬ ದೇವತೆ ಲಿಪಿಯ ಸೃಷ್ಟಿಕರ್ತ ಎಂದು ನಂಬಿದ್ದರು. ಎನ್ನುವಲ್ಲಿ ಭಾರತೀಯೇತರ ಸಂಸ್ಕೃತಿಗಳೂ ಲಿಪಿಯನ್ನು ದೈವೀಕರಿಸಿ ನೋಡುವುದು ಕಾಣುತ್ತವೆ.[೫] ಲಿಪಿಯನ್ನು ಒಂದೊಂದು ಧರ್ಮದವರು ತಮ್ಮದೇ ಭಾವನೆಗಳೊಂದಿಗೆ ವ್ಯಾಖ್ಯಾನಿಸಿದ್ದಾರೆ. ಲಿಪಿಕಾರನು ಕೃತಿಗೈಯುವಾಗ ಅವನ ಚಿತ್ತದತ್ತ ವಿಷಯಗಳನ್ನು ವ್ಯಕ್ತಪಡಿಸುವುದನ್ನು ನೋಡಬಹುದು. ಒಂದು ಕೃತಿಯನ್ನು ಒಂದೊಂದು ರೂಪದಲ್ಲಿ ಬರೆದಿರುವುದನ್ನು ಇಂದಿಗೂ ಕಾಣುತ್ತೇವೆ. ಇದು ಅವರವರ ಗುಣಾಸಕ್ತಿಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದು.

ಬರಹಕ್ಕೆ ಮಾಂತ್ರಿಕ ಶಕ್ತಿ ಇದೆ. ಓದು ಬರಹ ಪಡೆದುಕೊಂಡವರು ಹೊಸ ದಾರ್ಶನಿಕತೆ ಪಡೆದು ಕೊಳ್ಳುತ್ತಾರೆಂಬುದು ನಮ್ಮ ಿಿಯರ ನಂಬಿಕೆ. 'ಅನೇಕ ಕಾಡು ಜನರು ಬರಹವನ್ನು ಕಂಡು ಹೆದರುತ್ತಾರೆ. ಒಬ್ಬ ಹಿಂದುಳಿದ ವ್ಯಕ್ತಿ (ಅಕ್ಷರ ಕಲಿಯದೇ ಇರುವವನು) ಒಂದು ಕಾಗದವನ್ನು ತೆಗೆದುಕೊಂಡು ಹೋಗಲು ಹಿಂಜರಿಯುತ್ತಾನೆ ಯಾಕೆಂದರೆ ಅದನ್ನು ತೆಗೆದುಕೊಂಡು ಹೋಗವಾಗ

ತನ್ನೊಡನೆ ಮಾತಾಡೀತು ಎಂಬ ಭಯ. ಈಗಲು ಅಕ್ಷರಗಳನ್ನು ಬರೆದ ತಾಮ್ರದ ಸುರುಳಿಗಳನ್ನು ಕಾಗದದ ಚೂರುಗಳನ್ನು ಅಂತರಗಳನ್ನಾಗಿ ಮಾಡಿಕೊಂಡು ಕಟ್ಟಿಕೊಂಡರೆ ಅನಿಷ್ಟ ನಿವಾರಣೆಯಾಗುತ್ತದೆನ್ನುವ ನಂಬಿಕೆಯಿದೆ. ಕ್ರಿಶ್ಚಿಯನ್ನರಿಗೆ ಕಾಯಿಲೆಯಾದರೆ ಬೈಬಲ್ಲಿನ ಹಾಳೆಗಳಿಂದ ಗಾಳಿ ಬೀಸುವುದು ಅಥವಾ ಪ್ರಾರ್ಥನೆಯನ್ನು ಬರೆದ ಒಂದು ಹಾಳೆಯ ತುಂಡನ್ನು ನುಂಗಿಸುವುದು, ಶಾಸನಗಳಿಗೆ ಮಾಂತ್ರಿಕ ಶಕ್ತಿ ಇದೆ ಎನ್ನುವ ನಂಬಿಕೆ ಕರ್ನಾಟಕದಲ್ಲಿ ವಿಶೇಷವಾಗಿದೆ. ಓಲೆಯು ಪುಸ್ತಕಗಳನ್ನು ಓದಲು ಸಾಧ್ಯವಾಗದಿದ್ದರೂ ಅವುಗಳು ಪವಿತ್ರವೆಂದು ಜನ ಭಾವಿಸಿ ಪೂಜಿಸುತ್ತಾರೆ. ಹೀಗೆ ಬರಹಕ್ಕೆ ಮೊದಲಿನಿಂದಲೂ ಪೂಜ್ಯತೆಯು ಸಲ್ಲುತ್ತಾ ಬಂದಿದೆ'.[೬] ಅಂದಿನ ಬರವಣಿಗೆಗೂ ಇಂದಿನ ಬರವಣಿಗೆಗೂ ಸಾಕಷ್ಟು ವ್ಯತ್ಯಾಸವನ್ನು ಕಾಣಬಹುದು. ಅಂದಿನ ಬರವಣಿಗೆ ಬರೆಯಬೇಕಾದರೆ ತಾಳೆಗರಿಯನ್ನು ತಂದು ಹದಮಾಡಿ ಅದನ್ನು ಬಳಸುವುದು ಇನ್ನೊಬ್ಬರ ಕೆಲಸವಾಗಿತ್ತು. ಅದು ಅಷ್ಟೇ ಕಠಿಣತರ ಅಭ್ಯಾಸವಾಗಿತ್ತು. ಇಂದು ಇದೊಂದು ಕಂಪ್ಯೂಟರೀಕರಣವಾಗಿದೆ. ಇಂದಿನ ಬರವಣಿಗೆಗೆ ಬೆಲೆಯನ್ನು ನೀಡಲಾಗುವುದಿಲ್ಲ. ಅಂದಿನ ತಾಳೆಗರಿಗಳು ಇಂದಿಗೂ ಜೀವಂತ ಸನ್ನಿವೇಶಗಳನ್ನು ಬರೆದಿರುವರೋ ಎಂಬಂತೆ ಗೋಚರಿಸುತ್ತವೆ. ಅಂದು ಅಕ್ಷರಸ್ತರ ಕೊರತೆ ಇತ್ತು. ಆದರೆ ಇಂದು ಅಕ್ಷರಸ್ತ ಸಮಾಜ ಇರುವುದರಿಂದಲೇ ಬರವಣಿಗೆ ಬಗ್ಗೆಯಿದ್ದ ಮೂಢನಂಬಿಕೆಯನ್ನು ಕಿತ್ತೊಗೆದಿರುವುದು ಕಾಣುತ್ತದೆ.

ಜೈನ ಮತ್ತು ಬೌದ್ಧರ ಕಾಲದಲ್ಲಿ ಲಿಪಿಯನ್ನು ಉನ್ನತ ಸ್ಥಾನದಲ್ಲಿರಿಸಿಕೊಂಡಿರುವುದನ್ನು ಕಾಣುತ್ತೇವೆ. ಕೃತಿಗಿಂತಲೂ ಲಿಪಿಕಾರನಿಗೆ ಅಷ್ಟೇ ಪ್ರಾಮುಖ್ಯತೆಯನ್ನು ಕಲ್ಪಿಸಿದ್ದಾರೆ. ಲೇಖನವು ಒಂದು ಉತ್ಕೃಷ್ಟ ಕಲೆ ಎಂಬುದಾಗಿ ಹೇಳಿಕೊಂಡಿದ್ದಾರೆ. ಇವರ ಪ್ರಮುಖ ಗ್ರಂಥಗಳಾದ ವಿನಯ ಪಿಠಕದಲ್ಲಿ ಇಂಥ ಸಾಲುಗಳನ್ನು ವ್ಯಕ್ತಪಡಿಸಿದ್ದಾರೆಂದರೆ ಅವರ ಕೃತಿಗಿಂಗಲೂ ಲಿಪಿಕಾರನ ಕಾಯಕ ಧರ್ಮಶೀಲವಾದುದು. ಅಷ್ಟೇ ಕಠಿಣತರವಾದುದು 'ಬರವಣಿಗೆಯನ್ನು ಬರೀ ಹಾಳು ಹರಟೆಗಾಗಿ, ವೃಥಾ ಕಾಲಹರಣಕ್ಕಾಗಿ, ಕಲಿಯುವುದಲ್ಲ, ಅದು ಪವಿತ್ರ ಕಾರ್ಯವಾಗಿತ್ತು. ಒಂದು ಉಪಯುಕ್ತ ವೃತ್ತಿಯೂ ಆಗಿತ್ತು. ಬೌದ್ಧ ಸನ್ಯಾಸಿಗಳಿಗೆ ಈ ಕಲೆಯನ್ನು ಅಧ್ಯಯನ ಮಾಡಲು ಅವಕಾಶಕೊಟ್ಟಿದ್ದರು 'ಭಗ್ನ ಪೃಷ್ಠ ಕಟಿಗ್ರೀವಾಬದ್ದ ದೃಷ್ಟಿರದೋಮುಖಂ' ಎಂಬ ಮಾತು ಬರವಣಿಗೆಯ ಶ್ರಮವನ್ನು ತಿಳಿಸುತ್ತದೆ'.[೭] ಲಿಪಿಕಾರನು ತನ್ನ ಶ್ರಮವನ್ನು ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ, ಪಾಲಿಸುವರಾಗಿರಬೇಕು. ಬರೆಯುತ್ತಿರುವಾಗ ಎಲ್ಲ ಪಂಚೇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡು ನಿಷ್ಠೆಯಿಂದ ತಾಳ್ಮೆಯಿಂದ ಬರೆಯಬೇಕಾಗುತ್ತದೆ. ಕುಮಾರ ವ್ಯಾಸನಂಥವನು ಕವಿಕಾರನು, ಲಿಪಿಕಾರನೂ, ಆಗಿದ್ದು ತನ್ನ ಏಕಾಗ್ರತೆಯನ್ನು ತನ್ನ ಹಿಡಿತದಲ್ಲಿಟ್ಟು ಅಭ್ಯಾಸದಲ್ಲಿ ನಿರತರಾಗಿದ್ದರು. ಮಡಿಯಾದ ಬಟ್ಟೆ ಒಣಗುವವರೆಗೆ ಕುಮಾರವ್ಯಾಸ ಕಾವ್ಯ ಬರೆಯುತ್ತಿದ್ದನಂತೆ.

'ಬ್ರಾಹ್ಮೆಗೆ ಬರೆದು ತೋರಿದಂ ಲಿಪಿಗಳುಮಂ' ಎಂದು ಪಂಪ ಹೇಳಿದ್ದಾನೆ'.[೮] ವಿನಯ ಪಿಠಕದಲ್ಲಿ ಗೃಹಸ್ಥರಿಗೂ, ಸಂತತಿಯವರಿಗೂ ಲೇಖನ ದ್ರವ್ಯ ಸಂಪಾದನೆಯು ಉತ್ತಮಮಾರ್ಗವೆಂದು

ಸ್ಪಷ್ಟಪಡಿಸಿದ್ದಾರೆ. ಇವರಲ್ಲಿ ಜೈನ ವೀರಶೈವರಲ್ಲಿ ಸ್ತ್ರೀ–ಲಿಪಿಕಾರರೂ ಈ ವೃತ್ತಿಯಲ್ಲಿ ತೊಡಗಿದ್ದರು. 'ಭೂಕೈಲಾಸವುಳುವೆ ಮಹಾಮನೆ ಸುತ್ತಾನುವರ್ತಿಗಳಾದ ಬಾಳಪ್ಪ ಸ್ವಾಮಿಗಳ ಕರಸಂಜಾತಳಾದ ಪುಟ್ಟ ನಂಜಮ್ಮ'.[೯] ಯಲ್ಲಣ್ಣನ ಪುತ್ರಿ ಕಾಳವ್ವೆ, ಪಾರಿಶ್ವ ಅಜ್ಜಿಗಳು, ಭೈರಾಜಿ, ಪದುಮಾಯಿ, ಶ್ರೀಮತಿ ಅಕ್ಕ, ನಾಯಕರಾಗಿ ಕೆಂಪಿಯ ಮಗಳು ನಂಜಿಯಂಥ (ವೇಶ್ಯೆಯರು) ಮತ್ತು ಶಾನುಭೋಗ ಲಕ್ಷ್ಮೀಪತಿ ಇವರೆಲ್ಲರ ಬರಹವೂ ಶ್ರೇಷ್ಠ. ಸೀಮಿತ ವರ್ಗದಲ್ಲಿ ಹುಟ್ಟಿ ಸಾಹಿತ್ಯ ಕ್ಷೇತ್ರದಲ್ಲಿ ಅದ್ವಿತೀಯ ಸ್ಥಾನ ಪಡೆದಿದ್ದನ್ನು ಇವರ ಕಾಲದಲ್ಲಿ ನೋಡಬಹುದಾಗಿದೆ.

ಕ್ರಿ.ಶ. ೧೨ನೇ ಶತಮಾನದ ಹೊತ್ತಿಗೆ ಬರಹ ಒಂದು ಪವಿತ್ರ ಕಾಯಕವಾಗಿ ತಳವೂರಿ ನಿಂತಿರುವುದನ್ನು ಸ್ಪಷ್ಟವಾಗಿ ತಿಳಿಯಬಹುದು. ಕಾಯಕವೇ ಕೈಲಾಸ ಎಂಬಂತೆ ತಮ್ಮ ವೃತ್ತಿಯಂತೆ ತಿಳಿದು ತಮ್ಮದೇ ಆದ ನಿರಂತರ ಕಾರ್ಯದಲ್ಲಿ ಸಮರ್ಪಕವಾಗಿ ವೃತ್ತಿ–ಪ್ರವೃತ್ತಿಯಾಗಿ ಬೆಳೆದುನಿಂತಿದೆ.

'ಅಸಿ ಕೃಷಿ ಮಸಿಯಾಚಕ ವಾಣಿಜ್ಯತ್ವವ ಮಾಡುವುದು ಲೇಸು
ಹುಸಿ ವೇಷವ ತೊಟ್ಟು ಅಸುವ ಹೊರೆವವನ ಘಟಪಿಸಿತದ ತಿತ್ತಿಯಂತೆ
ಅಘಟಿತ, ಅವನೊಲ್ಲ ಅರ್ಕೇಶ್ವರಲಿಂಗ'.[೧೦]

ಈ ವಚನದಲ್ಲಿ ಲಿಪಿಕಾರನ ಕಾಯಕ ಅವನು ಮಾಡುತ್ತಿರುವ ಗೌರವವನ್ನು, ಘನತೆಯನ್ನು, ಎತ್ತಿ ಹಿಡಿದಿದೆ. ಒಬ್ಬರು ಲಿಪಿ ಮಾಡಿದರೆ, ಇನ್ನೊಬ್ಬರು ಮಸಿ ಹಾಕುವುದು, ಬಡಿಗ ಅದಕ್ಕೆ ಸಮತಲವಾದ ಕಟ್ಟಿಗೆಯ ಎರಡು ಹಲಗೆಗಳನ್ನು, ತಾಳೆಗರಿಗಳನ್ನು ಹದ ಮಾಡುವವರು ಇದ್ದರು. ಹೀಗೆ ಎಲ್ಲರೂ ವೃತ್ತಿಭೇದವಿಲ್ಲದೆ ಸೇರಿ ಈ ಕಾಯಕದಲ್ಲಿ ತೊಡಗುತ್ತಿದ್ದರು. ಬೌದ್ಧಿಕತೆ ಶ್ರೇಷ್ಠವಾಗಿ, ಭೌತಿಕತೆ ಮತ್ತು ದೈಹಿಕ ಪರಿಶ್ರಮಗಳು ನಿರ್ಲಕ್ಷಿತವಾಗಿ ಕಾಣುವ ಸಂದರ್ಭದಲ್ಲಿ ಇದು ತಿರುಮುರುವಾಗುತ್ತದೆ. ಹಿಂದೆ ಇಷ್ಟೆಲ್ಲ ಹಸ್ತಪ್ರತಿ ತಯಾರಿಕೆ ವೃತ್ತಿಯವರು ನಿರತರಾಗಿರುತ್ತಿದ್ದರು. ಕವಿಗಿಂತಲೂ ಇವರು ಒಂದು ಹೆಜ್ಜೆ ಮುಂದೆ ಎನ್ನುವುದು ಬೌದ್ಧಧರ್ಮದಲ್ಲಿ ಉಲ್ಲೇಖಿಸಿರುವುದು ಕಾಣಬಹುದು. ಇಲ್ಲಿಂದಲೇ ಬರೆಪಕಾರರು ಸಾಮಾಜಿಕ ಮೌಲ್ಯಗಳೊಂದಿಗೆ ಸಂಸ್ಕೃತಿಯ ಕ್ಷೇತ್ರದಲ್ಲಿ ತಮ್ಮದೇ ಸ್ಥಾನವನ್ನು ಪಡೆದುಕೊಳ್ಳುತ್ತಾರೆ. ಲಿಪಿಕಾರರು ಲಿಪಿಗೈಯುವಾಗಲೂ ತಮ್ಮ ವಿನಮ್ರತೆ ಹಾಗೂ ಭಕ್ತಿಯನ್ನು ತೋರಿಸಿಕೊಟ್ಟಿದ್ದಾರೆ.

'ಹಸ್ತವೇಗ ಜಡಬುದ್ಧಿ ಪೂರ್ವಕಂ
ಕ್ಷಮತು ಮರ್ಹಥ ಸಮೀಕ್ಷ್ಯ ಸಜ್ಜನಾಂ
ಕೈ ತಪ್ಪು ಉಂಟಾದರೆ ಬಲ್ಲಂತಾ ಜಾಣರು ತಿದ್ದಿಕೊಂಡು ಓದುವುದು'[೧೧]

ಹಸ್ತಪ್ರತಿಗಳನ್ನು ಬರೆಯುವಾಗ ಕೈ ತಪ್ಪಿ, ಬುದ್ಧಿ ನಿಲುಕದೆ ಹೋದಾಗ, ಮನಸ್ಸು ಇಲ್ಲದಿದ್ದರೂ ಬರೆಯುತ್ತಿರುವಾಗ ಏನೆಲ್ಲ ಅಡ್ಡಿಗಳು ಎದುರಾಗುತ್ತದೆ. ಆದ್ದರಿಂದ ನೀವು ತಿಳಿದಂತವರು ನಮ್ಮನ್ನು ಬಯ್ಯದೇ ತಿದ್ದಿಕೊಂಡು ಓದಬೇಕು ಎಂದು ವಿಭುದರಿಗೆ ಹೇಳಿಕೊಳ್ಳುವ ಪರಿಯೊಂದನ್ನು

ತಿಳಿಸಿಕೊಟ್ಟಿದ್ದಾರೆ. ಬರಹ ವೃತ್ತಿಯು ಬಹು ಕಠಿಣತರ ವೃತ್ತಿಯಾಗಿದ್ದು, ತಮ್ಮ ವಿಧೇಯತೆಯನ್ನು ಇಂಥ ಉದಾಹರಣೆಗಳನ್ನು ಸ್ವತಃ ಅವರೇ ತಿಳಿಸಿಕೊಟ್ಟಿದ್ದಾರೆ.

ಲಿಪಿಕಾರರು ಲಿಪಿಗೈಯುವಾಗಲೂ ಅವರೆಲ್ಲ ನಿಷ್ಟ-ಅನಿಷ್ಟಗಳನ್ನು ತಮ್ಮ ಗುರುವಿಗೆ ಸಮರ್ಪಿಸಿ ಕೊಟ್ಟಿರುತ್ತಾರೆ. 'ಯನ್ನ ಕಂಗಳು ಜಿಹ್ವೆ ಕರಕರ್ಣಂಗಳು ಗತಿಮತಿ ಚೈತನ್ಯಕ್ಕೆ ಸಮಸ್ತ ಸದ್ಭಕ್ತ ವೀರಮಾಹೇಶ್ವರರುಗಳೇ ಕರ್ತರು', ಲಿಪಿಗೈಯುವಾಗ ಮೊದಲೇ ದೇವರ ಹೆಸರಿನಿಂದಲೇ ಪ್ರಾರಂಭಮಾಡಿ, ಅಂತ್ಯಕ್ಕೆ ಗುರುಗಳ ಹೆಸರನ್ನು ಹೇಳುತ್ತಾರೆ. ಇವರು ತಮ್ಮ ಎಲ್ಲ ಕಾರ್ಯಗಳನ್ನು ಗುರುವಿಗೆ ಅರ್ಪಿಸಿ ಬರೆವ ಕಾಯಕದಲ್ಲಿ ತೊಡಗಿರುತ್ತಾರೆ. ಕಣ್ಣುಗಳು, ನಾಲಿಗೆ, ಕೈ, ಬುದ್ಧಿ ಚೈತನ್ಯಕ್ಕೆ ಗುರುವೇ ಕಾರಣನೆಂದು ನಂಬಿಕೊಂಡು ಬಂದಿರುವುದು ಕಂಡುಬರುತ್ತದೆ. ಲಿಪಿ ಬರೆಯುವಾಗ ಒಳ್ಳೆಯ ದಿನಗಳನ್ನೇ ಆಧರಿಸಿಕೊಂಡು ಪ್ರಾರಂಭಿಸುತ್ತಾರೆ. ಅಂತ್ಯಗೊಳಿಸಬೇಕಾದರೆ ಕೂಡ ಶುಭದಿನಗಳಲ್ಲಿಯೇ ಮುಕ್ತಾಯಗೊಳಿಸುತ್ತಿದ್ದರು.

ಮಠಮಾನ್ಯಗಳಲ್ಲಿ ಪಾಠ ಪ್ರವಚನಗಳನ್ನು ಆರಂಭಿಸಬೇಕಾದರೆ ಕೂಡ ಶುಭದಿನಗಳಲ್ಲಿಯೇ ಪ್ರಾರಂಭಿಸುತ್ತಾರೆ ಮತ್ತು ಶುಭದಿನಗಳಲ್ಲಿಯೇ ಅಂತ್ಯಗೊಳಿಸುತ್ತಾರೆ. ಅಂತ್ಯಗೊಳಿಸುತ್ತಿರುವಾಗ ಅಲ್ಲಿಗೆ ನಿಲ್ಲಿಸುವುದಿಲ್ಲ. ಮತ್ತೇ ಪ್ರಾರಂಭಿಸಿ ಸ್ವಲ್ಪ ಮುಂದುವರೆಸಿ ಮುಕ್ತಾಯವನ್ನು ಮಾಡುವ ಪರಿಪಾಠ ಇಂದಿಗೂ ಕೂಡ ನಡೆಯುತ್ತಿರುವುದನ್ನು ನೋಡುತ್ತೇವೆ. ಉದಾಹರಿಸಬಹುದಾದರೆ ಮಹಾಭಾರತದ ಕಥೆಗಳು ಒಂದೊಂದು ಕಥೆ ಒಬ್ಬರ ಚರಿತ್ರೆಯನ್ನೇ ವಿಸ್ತರಿಸಿ ಹೇಳುತ್ತವೆ. 'ಕುಮಾರವ್ಯಾಸ ಮಹಾಭಾರತವು ಲೌಕಿಕತೆಯಿಂದ ದೈವೀಕತೆಯತ್ತ ತಿರುಗುತ್ತದೆ. ವಿರಾಟ ಪರ್ವವಂತೂ ಮಳೆ ಬೆಳೆಯಂತಹ, ಕೃಷಿ ಪ್ರಧಾನ ಸಂಸ್ಕೃತಿಯ ಸಂಕಥನವಾಗೇ ಬೆಳೆದು ಬಂದಿತು. ಮಳೆ ಬಾರದಿದ್ದಾಗ, ಬರಬಿದ್ದಾಗ ಈ ಕತೆಯನ್ನು ಓದುತ್ತಿದ್ದರು'.[೨] ಈ ಪದ್ಧತಿ ಇಂದಿಗೂ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಮುಂದುವರಿದುಕೊಂಡು ಬಂದಿದ್ದನ್ನು ಕಾಣುತ್ತೇವೆ.

**ಭಾಷೆ :**

ಜನರ ಭಾಷೆ ಸ್ವರೂಪದ ಬದಲಾದಂತೆ, ವ್ಯಾಖ್ಯೆ ಅಕ್ಷರಗಳ ಸಂಯೋಜನೆಯೂ ಬದಲಾವಣೆ ಹೊಂದುತ್ತವೆ. ಇದರಿಂದ ಸಮಾಜದ ರೂಪಗಳು ಬದಲಾಗುತ್ತಾ ಬರಲಾರಂಬಿಸಿದವು. ಭಾಷೆಯನ್ನು ಚಲನಶೀಲಗೊಳುತ್ತಿರುವ ಜನಸಾಮಾನ್ಯರ ಆಲೋಚನೆಗೆ ಭಾವನೆಗಳಿಗೆ ತಕ್ಕಂತೆ ಅವರ ಅಭಿಪ್ರಾಯಗಳನ್ನೇ ಆಧಾರಗಳಾಗಿ ಪಡೆದುಕೊಂಡರು. ಇದರಿಂದ ಅಕ್ಷರಗಳು ಅವಿನಾಶಿಯಾಗಿ ಉಳಿದಂತೆ ಎಂದೆಂದಿಗೂ ಕಾಣುವಂತೆ ಶಿಲಾಶಾಸನಗಳ ಮೇಲೆ ದೊಡ್ಡ ದೊಡ್ಡ ಬಂಡೆಗಲ್ಲುಗಳ ಮೇಲೆ ಕೊರೆದಿರುವುದನ್ನು ಕಾಣುತ್ತೇವೆ.

ಭಾಷೆ ಮಾನವನಿಗೆ ದೇವರು ನೀಡಿದ ವರ ಎನ್ನುವ ನಂಬಿಕೆ ಜಗತ್ತಿನಾದ್ಯಂತ ಇದೆ. ಭಾಷೆಗಳೆಲ್ಲವೂ ಭಗವಂತನಿಂದಲೇ ಸೃಷ್ಟಿಯಾದವು ಎಂಬುದು ಭಟ್ಟಾಕಳಂಕನ ಅಭಿಪ್ರಾಯ. ಚೀನಾ

ದೇಶದಲ್ಲಿ ದೇವರಿಂದಲೇ ಮನುಷ್ಯನಿಗೆ ಭಾಷೆ ದೈವದತ್ತವಾಗಿ ಬಂದಿದೆ, ಜನಪದದಲ್ಲಿ ಇಡೀ ಸೃಷ್ಟಿಯಲ್ಲಿ ಬರೀ ನೀರಿತ್ತು. ಬ್ರಹ್ಮ, ವಿಷ್ಣು ಮಹೇಶ್ವರರಲ್ಲಿ ಬ್ರಹ್ಮ ಇಡೀ ಜೀವರಾಶಿಯನ್ನು ಸೃಷ್ಟಿ ಮಾಡಿದ. ಭಾಷೆ, ದೇವರು ನೀಡಿದ. ವರ ಇದರಿಂದಲೇ ಎಲ್ಲ ಪ್ರಾಣಿಗಳಿಗಿಂತ ಮನುಷ್ಯ ಮೇಲು'.[೧೩] ಹೀಗೆ ಭಾಷೆ ಪ್ರಾಚೀನ ಕಾಲದಿಂದಲೂ ದೈವೀಸ್ವರೂಪವೆಂಬಂತೆ ತಾವು ಉಪಯೋಗಿಸಿಕೊಳ್ಳುತ್ತಿರುವ ಪ್ರತಿಯೊಂದು ವಸ್ತುಗಳನ್ನೇ ದೈವೀ ರೂಪದಲ್ಲಿ ಅವರು ಕಾಣುತ್ತಿದ್ದರು.

ನಮ್ಮ ಬುದ್ಧಿಗೆ ಭಾಷೆಯೆಂಬ ಬೆಳಕು ಇಲ್ಲದಿದ್ದರೆ ಇಡೀ ಪ್ರಪಂಚವೇ ಅಂಧಕಾರದಲ್ಲಿ ಮುಳುಗಿ ಹೋಗುತ್ತಿತ್ತು. ಬದುಕುವುದೆ ದುಸ್ತರವಾಗಿ ಇರುತ್ತಿತ್ತು. ಸಮಾಜ ಜೀವನವೇ ಅಸಾಧ್ಯ ಮಯವಾಗುತ್ತಿತ್ತು. ಅಲ್ಲಮನ ವಚನದ ಸಾಲಿನಂತೆ 'ಮಾತೆಂಬುದು ಜ್ಯೋತಿರ್ಲಿಂಗ' ಭಾಷೆ ಇಲ್ಲದಿದ್ದರೆ ಜೀವನವೇ ಕತ್ತಲ ಮಯವಾಗಿರುತ್ತಿತ್ತು. ಇತರರೊಂದಿಗೆ ವ್ಯವಹರಿಸಲು, ತನ್ನ ಭಾವನೆಗಳನ್ನು ಬಿಚ್ಚಿಹೇಳಲು, ಮತ್ತು ಆಲೋಚನೆಗಳನ್ನು ವ್ಯಕ್ತಪಡಿಸಲು ಅಸಾಧ್ಯವಾಗುತ್ತಿತ್ತು. ಇಂದು ಭಾಷೆಯಿಂದಲೇ ದಿನ ದಿನಕ್ಕೆ ಹೊಸ ಹೊಸ ಆವಿಷ್ಕಾರಗಳತ್ತ ನಮ್ಮ ಹೆಜ್ಜೆಗಳನ್ನು ಇಡಲು ಪ್ರಾರಂಭಿಸುತ್ತಿದ್ದೇವೆ.

'ಭಾಷೆ ದೇವರ ಕೊಡುಗೆ ಎಂದು ಋಗ್ವೇದದ ಏಳನೆಯ ಮಂಡಲದಲ್ಲಿ ಹೇಳಲಾಗಿದೆ. ಜೆನೆಸಿಸ್ ಎಂಬ ದೇವತೆಯಿಂದ ಭಾಷೆ ಹುಟ್ಟಿತೆಂದು ನಂಬಿಕೆ'.[೧೪] ಪ್ರಾಚೀನ ಕಾಲದಲ್ಲಿರುವ ಕೆಲವೊಂದು ಮಹಾನ್‌ಗ್ರಂಥಗಳೆಲ್ಲವೂ ಸತ್ಯದಿಂದ ಉನ್ನತಮಾರ್ಗಗಳೆಡೆಗೆ ಸಾಗುವಂತೆ ಮಾನವನಿಗೆ ಆಜ್ಞಾದಾರಕಗಳಾಗಿವೆ. ವೇದಗಳೆಂದರೆ ಇವು ಕೂಡ ನಿಷ್ಠೆ, ನ್ಯಾಯ, ಶಿಸ್ತು, ಕಠಿಣತೆಗಳನ್ನೆಲ್ಲ ನೇರವಾಗಿ ತಿಳಿಸಿಕೊಡುವಲ್ಲಿ ಮಹತ್ವವೆನಿಸಿಕೊಂಡಿವೆ.

'ಭಾಷೆಯ ಉಪಯೋಗವನ್ನು ಕಂಡುಕೊಂಡ ಮನುಷ್ಯ ಮನುಷ್ಯನಾದ; ಲೇಖನದ ಉಪಯೋಗವನ್ನು ಕಂಡುಕೊಂಡ ಮನುಷ್ಯ ನಾಗರೀಕನಾದನು'.[೧೫] ಭಾಷೆ ಪ್ರತಿಯೊಬ್ಬ ನಾಗರೀಕನಿಗೂ ತನ್ನ ತನವನ್ನು ಕಂಡುಕೊಳ್ಳಲು ಸಹಕರಿಸುತ್ತದೆ. ಭಾಷೆಯನ್ನು ಕಂಡುಕೊಳ್ಳದೇ ಹೋಗಿದ್ದರೆ ತನ್ನ ಅಧಿಕಾರವನ್ನು ಬೇರೊಬ್ಬರ ಕೈಯಲ್ಲಿ ಕೊಟ್ಟು ತಾನೂ ಕತ್ತಲಿನ ಜಗತ್ತಿನಲ್ಲಿ ಕಣ್ಣು ಕಟ್ಟಿಕೊಂಡು ಕುಳಿತಿರುವ ನೈಜ ಸ್ಥಿತಿ ಒದಗುತ್ತದೆ. ಇಂತಹ ಸ್ಥಿತಿಹೀನರಿಗೆ ಇಂದು ಏನೆಲ್ಲ ಸರಕಾರದ ಸೌಲಭ್ಯಗಳು ಅಕ್ಷರ ಕಲಿಸುತ್ತಿರುವ ಅಂಗವಿಕಲರ, ಅಂಧರ, ಕಿವುಡರ, ಎಳವರ, ಮೂಕರಿಗೆ ಇವರೆಲ್ಲರಿಗೂ ಅವರವರ ಆದ್ಯತೆಗಳಿಗನುಗುಣವಾಗಿ ನೀಡುವ ವ್ಯವಸ್ಥೆ ಇಂದು ಜಾರಿಯಲ್ಲಿದೆ. ಎಂಥವರು ಕೂಡ ಶಿಕ್ಷಣದಿಂದ ವಂಚಿತರಾಗಬಾರದೆಂಬುದೇ ಶಿಕ್ಷಣದ ಉದ್ದೇಶವಾಗಿದೆ.

ಈ ಭಾಷೆ 'ಅಂದು ಯುರೋಪಿನ ಕಾಲದಲ್ಲಿ ತತ್ವಶಾಸ್ತ್ರ ಮತ್ತು ಸಾಹಿತ್ಯಗಳು ಜನರಿಗೆ ಅರ್ಥವಾಗದಿರುವುದರಿಂದ ಮೃತ ಭಾಷೆಯಲ್ಲಿ ರಚಿತವಾಗಿರುವಂತೆ ಸಂಸ್ಕೃತಿಯಲ್ಲಿ ನೋಡಬಹುದಾಗಿತ್ತು. ಭಾಷೆ ಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲದ್ದರಿಂದ ಸಂಸ್ಕೃತ ಭಾಷೆಯು ವಿದ್ವಾಂಸರ 'ಎಸ್ಪಾರಾಂಟೋ' ಭಾಷೆಯಾಗಿ ಉಳಿದುಕೊಂಡಿತ್ತು'.[೧೬] ಇದೊಂದು ಕೃತಕ ಭಾಷೆಯಾಗಿದ್ದು ಅದು ಲಿಪಿ ಬರವಣಿಗೆಯಿಂದ ಅಂದು ದೂರ ಉಳಿದಿತ್ತು. ಆಚಾರ ವಿಚಾರಗಳು, ಪಾಠ ಪ್ರವಚನಗಳು,

ಸಂಸ್ಕಾರಗಳು, ಸ್ವಪ್ರೇರಣೆಗಳನ್ನು ಸೃಷ್ಟಿಸಲು ಮುಂದಾದರು. ತತ್ವಶಾಸ್ತ್ರ, ವೈದಿಕಶಾಸ್ತ್ರಗಳೊಂದಿಗೆ ಸಂಪರ್ಕಿಸಲು ಪ್ರಾರಂಭವಾಯಿತು. ನಂತರ ಹಂತ ಹಂತವಾಗಿ ಭಾಷೆಯನ್ನು ಅರ್ಥಮಾಡಿಕೊಂಡು ಭಾಷೆ ಬೆಳೆಯಲು ಅನುಕೂಲವಾಯಿತು.

'ಮಧ್ಯಯುಗೀನ ಭಾರತದಲ್ಲಿ ಒಂದೆಡೆ ಜನಸಾಮಾನ್ಯರನ್ನು ಕೇಂದ್ರವಾಗಿಟ್ಟುಕೊಂಡು ಬೆಳೆದ ಭಕ್ತಿ ಸಾಹಿತ್ಯ, ಅದು ಜನಹಿತ ಸಾಹಿತ್ಯವಾಗಿತ್ತು. ಇನ್ನೊಂದೆಡೆ ಜನಸಂಪರ್ಕವನ್ನು ಕಳೆದುಕೊಂಡು ಸಂಸ್ಕೃತ ಜೀವಂತವಾಗಿತ್ತು'.[೧೭] ಇದರಿಂದ ಭಾಷೆ ಸಂಪರ್ಕ ಕುಸಿಯುತ್ತಿತ್ತು. ಆದರೂ ಸಂಸ್ಕೃತ ಲಾಕ್ಷಣಿಕರು ಭಾಷೆಯನ್ನು ಪಸರಿಸುವಂತೆ ಭಿನ್ನ ಭಿನ್ನ ರೂಪಗಳಲ್ಲಿ ಬಳಸುತ್ತಿದ್ದರು. ಆದರೂ ಭಾಷೆ ತನ್ನದೇ ಆದ ಘನತೆ ಗೌರವಗಳೊಂದಿಗೆ ದೃಢವಾಗಿ ನಿಂತಿದೆ. ಇಂತಹ ಭಾಷೆಯ ಹೇಳಿಕೆಗಳೇ ಇಂದಿನ ದಿನದಲ್ಲಿ ದಾರಿದೀಪಗಳಾಗಿವೆ.

ಆ ಕಾಲದ ಬರವಣಿಗೆಗಳು ಮುದ್ದಣ್ಣನಂತಹ-ದೇಶಿ, ವಿದೇಶಿಯ ವಿದ್ವಾಂಸರ ಪ್ರಮುಖವಾದ ಕೆಲವೊಂದು ವಾಕ್ಯಗಳೆಲ್ಲವು ಸಂಸ್ಕೃತದಲ್ಲಿರುವುದು ಕಂಡುಬರುತ್ತದೆ. ಕನ್ನಡ ಹಸ್ತಪ್ರತಿಗಳು ಇಂತಹ ಅಂಶಗಳನ್ನು ಅಳವಡಿಸಿಕೊಂಡಿವೆ. ಶಿಷ್ಟಸಾಹಿತ್ಯದ ಶ್ರೇಷ್ಠ ಪಾಂಡಿತ್ಯದ ಪರಿಕಲ್ಪನೆಗಳು ಮುದ್ದಣ್ಣನವರ ಬರವಣಿಗೆಯ ಮೇಲೂ ಪ್ರಭಾವ ಬೀರಿವೆ. ನಂತರ ಕಾಗದವನ್ನು ಮುಸಲ್ಮಾನರು ಕ್ರಿ.ಶ.ಸು.೧೦೦೦ರಲ್ಲಿ ಜಾರಿಗೆ ತಂದರು. ಆದರೆ ೧೭ನೇ ಶತಮಾನದವರೆಗೆ ಬರವಣಿಗೆ ಸಾಮಗ್ರಿಗಳನ್ನು ಬದಲಿಸಲಾಗಲಿಲ್ಲ. ಕಾರಣ ತಾಳೆಗರಿಗಳೇ ಪವಿತ್ರ ಎಂಬ ಭಾವನೆ. ಧಾರ್ಮಿಕ ರಹಸ್ಯಗಳನ್ನು ಕೈ ಬರವಣಿಗೆಯಿಂದಲೇ ಬೇರೊಂದು ಭಾಷೆಗಳಲ್ಲಿಯೂ ಈ ವಿಷಯಗಳನ್ನು ಬರೆಯುತ್ತಿದ್ದರು. ಇಂತಹವುಗಳನ್ನೆಲ್ಲ ಮುದ್ರಣಯಂತ್ರಗಳು ಬಂದು ಮಡಿಯನ್ನು ಮೈಲಿಗೆ ಮಾಡಿದವು. ಆದರೂ ಕೈಬರವಣಿಗೆಗಳಿಂದ ಬರೆದ ಕನ್ನಡ ಹಸ್ತಪ್ರತಿಗಳ ಹೆಗ್ಗಳಿಕೆಯೇ ಇಲ್ಲಿ ಕಂಡುಬರುತ್ತದೆ.

'.... ಇತಿ ಶ್ರೀಮತ್ಪರಮಹಂಸ ಪರಿವ್ರಜೆ/ ಕಾಚಾರ್ಯ ಶ್ರೀ ಚಿದಾನಂದಗುರುವಾರ್ಯ ಚರಣಪದ್ಮದ್ವಿರೇಭ/ ಶ್ರಿ ಚಿದಾನಂದವಧೂತ ವಿರಚಿತ, ಪಾರ್ವತಿ ಮಹಾತ್ಮೆ ಅಷ್ಟಾದಶೋಧ್ಯಾಯ। ಜೀವನ್ಮೂಕ್ತಿ, ನಾಮಕಥಾ ಸಂಪೂರ್ಣಂ। ಶ್ರೀ ಗುರುನಾಥಾರ್ವಣಮಸ್ತು। ಶ್ರೀಶ್ರೀಶ್ರೀಶ್ರೀ ಗುರುಬಗಳಾಂಬಿಕಾ ಪ್ರಸನ್ನ। ದುಂದುಭಿನಾಮ ಸಂ ವೈಶಾಖ॥ ಭಾರ್ಗವಾರ ಶುಭನಕ್ಷತ್ರ ಶುಭತಿಥಿ ಶುಭವಾರ ಶುಭಯೋಗ ಶುಭಕರಣದಲಿ ದೇವಿ ಮಹಾತ್ಮೆ ಸಮಾಪ್ತಿ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ ಶ್ರೀ। ಯಿತಿ ದೇವಿಮಹಾತ್ಮೆ ಸಂಧಿ ಐದಕ್ಕೆ ಪದನು ೭೯ಲಕ್ಕೆ.... ಮಂಗಳ ಮಹಾಶ್ರೀ ಶ್ರೀ ಶ್ರೀ ಶ್ರೀ ಶ್ರೀ'.[೧೮] ಎಂಬಂತಹ ಧಾರ್ಮಿಕ ವಿಚಾರಣೆಗಳನ್ನು ಒಳಗೊಂಡಿರುವ ಸಂಗತಿಗಳನ್ನು ಕನ್ನಡ ತಾಳೆಗರಿಗಳ ಆದಿ ಅಂತ್ಯಗಳಲ್ಲಿ ಕಾಣುತ್ತೇವೆ. ಆರಂಭದಲ್ಲಿ ಮೊದಲು ತನ್ನ ಆರಾಧ್ಯ ದೈವವಾಗಿದ್ದ ಗುರುಗಳಿಗೆ ನಮಿಸುತ್ತ ತನ್ನ ಕಾಯಕದಲ್ಲಿ ತೊಡಗುತ್ತಾನೆ. ಇದು ೧೮ ಅಧ್ಯಾಯಗಳನ್ನು ಒಳಗೊಂಡಿದೆ. ಇಂತಹ ಕೃತಿಗಳನ್ನು ಬರೆಯುವವರೂ ಮತ್ತು ಆಲಿಸುವವರೂ ದೇವರ ಮುಕ್ತಿಗೆ ಪಾತ್ರರಾಗುತ್ತಾರೆ. ಇಡೀ

ಶಕ್ತಿಯೇ ಇಲ್ಲಿ ಸೃಷ್ಟಿಸುವಂತಹ ಅಂಶವನ್ನು ಈ ದೇವಿ ಪಡೆದಿರುತ್ತಾಳೆ. ದುಷ್ಟರನ್ನು ಸಂಹರಿಸಿದ ಆ ಸಾಕ್ಷತ್ ಚಾಮುಂಡಿಯೇ ಸಕಲ ವಿದ್ವತ್ತನ್ನು ಪರಿಹರಿಸಿದವಳು. ಇಂತಹ ದೈವೀ ಅಂಶಗಳನ್ನು ಯಾರು ಪಡೆಯುವರೋ ಅವರೇ ಸದ್ಗುಣ ಸಂಪನ್ನರಾಗುತ್ತಾರೆಂಬ ನಂಬಿಕೆ. ಇಂತಹ ಕಥೆಗಳನ್ನು ಆ ದೇವಿಯ ವಾರ. ಶುಭವಾರ ಶುಭ ನಕ್ಷತ್ರ ಶುಭ ತಿಥಿಯ ಶುಕ್ರವಾರದಂದು. ಮುಕ್ತಾಯ ಮಾಡುವ ಪರಿಪಾಠವನ್ನು ನಮ್ಮ ತಾಳೆಗರಿಯಂತಹ ಕೃತಿಗಳಲ್ಲಿ ಕಾಣುತ್ತೇವೆ.

ಕೃತಿಕಾರ ಬರವಣಿಗೆಯನ್ನು ಮಾಡುವಾಗ ಆರಂಭ ಮತ್ತು ಕೊನೆಯಲ್ಲಿ ಕುಲಗೋತ್ರಗಳನ್ನು ಹೇಳುವಾಗ ಆತನು ತನ್ನ ಅನನ್ಯತೆಯನ್ನು ಉಳಿಸಿಕೊಳ್ಳುತ್ತಾನೆ. ಕೃತಿ ಶಿಷ್ಠ ಕನ್ನಡದಲ್ಲಿದ್ದರೆ ಪ್ರತಿಕಾಷ್ಠರನ ಪಠ್ಯ ಪ್ರಾದೇಶಿಕ ಭಾಷೆಯಲ್ಲಿ ಇರುತ್ತದೆ. ಇದು ಅವರ ಜಾಣ್ಮೆಯಾಗಿದೆ. ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ವೈಶಿಷ್ಟ್ಯವೇ ಇದಾಗಿದೆ. ಇಂತಹವುಗಳನ್ನೆಲ್ಲ ಕಲ್ಪಿಸಿಕೊಂಡರೆ ನಮ್ಮ ಹಸ್ತಪ್ರತಿಗಳು ಹೀಗಿರುವುದೊಂದು ವೈಶಿಷ್ಟ್ಯವೆನಿಸಿಕೊಂಡಿದೆ.

ಹಸ್ತಪ್ರತಿಗಳ ಸಮೂಹ ಸಂಪತ್ತೆಂದು ಹೇಳಬಹುದು. ಇಂದು ಕೆಲವೊಂದು ಭಾಷೆಗಳಲ್ಲಿ ಕನ್ನಡ ಹಸ್ತಪ್ರತಿಗಳು ಹುಟ್ಟಿಕೊಂಡಿವೆ. ಇವು ಕನ್ನಡಿಗರ ಆಗುಹೋಗುಗಳಲ್ಲದೆ, ಎಲ್ಲರ ಮನೋಬಯಕೆಗಳನ್ನು ಈಡೇರಿಸುವ ಸಾಧನವಾಗಿವೆ. ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕತೆಯಲ್ಲಿಯೂ ತನ್ನ ನಿಲುವುಗಳನ್ನು ತೋರಿಸಿ ಕೊಟ್ಟಿವೆ. ಇವು ಮಾನವನಿಗೆ ಸಕಲ ಕಾರ್ಯಗಳಲ್ಲಿ ಉಪಯೋಗವಾಗುವ ವಸ್ತುಗಳಾಗಿ ಮಾಡಿಕೊಂಡಿರುವಂತ ಅಂಶಗಳು ಈ ತಾಳೆಗರಿಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಹಸ್ತಪ್ರತಿಗಳು 'ಗತಿಸಿಹೋದ ಸಂಗತಿಗಳನ್ನು ನಮ್ಮ ಕಣ್ಮುಂದೆ ತಂದು ಮಾತನಾಡಲು ಸಹಕರಿಸಿ, ಅವರ ಬರವಣಿಗೆಯ ಭಾಷೆ ತಿಳಿಸುವ ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ಒಡಮೂಡಿಸುತ್ತವೆ'.[೧೯] ಇವುಗಳನ್ನಾಧರಿಸಿ ಮಾನವನು ಸಾಂಸ್ಕೃತಿಕ ಭಾವನೆಗಳನ್ನು ಬರವಣಿಗೆಯ ಮೂಲಕ ವ್ಯಕ್ತಪಡಿಸುವನು. ಅವನ ಆಸಕ್ತಿ ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿದಾಗ ಸಾಹಿತ್ಯದ ರೂಪರೇಷೆಗಳನ್ನು ಅಭಿವ್ಯಕ್ತಪಡಿಸುವಾಗ ತನ್ನ ಮನಸ್ಸಿನ ಆಳದಲ್ಲಿ ವಿಚಾರಗಳಿಗಾಗಿ ಶಬ್ದಗಳೇ ಸಾಲವೆಂದು ತಿಳಿದುಕೊಳ್ಳುತ್ತಾನೆ. ಬರೆಯುವ ಬರೆವಣಿಗೆಯಲ್ಲಿ ಒಂದೇ ಭಾಷೆಯನ್ನು ಆಧರಿಸಿ ಬರೆಯಲಾಗುತ್ತದೆ. ಮಾತು, ಭಾಷೆ ಮತ್ತು ಬರವಣಿಗೆ ಇವು ಒಂದೇ ರೀತಿಯಾಗಿದ್ದರೂ ತಮ್ಮದೇ ಆದ ಕಲ್ಪನೆಗಳೊಂದಿಗೆ ರೂಪಾಂತರಕ್ಕೊಳಗಾಗುತ್ತವೆ. ಲೇಖಕ ಒಂದು ವಿಷಯವನ್ನು ಹೇಳಬೇಕಾದರೆ ಅದು ಭಾಷೆಗೆ ಬದ್ಧವಾಗಿರುತ್ತದೆ. ತಾನೂ ಬೇರೊಂದು ರೀತಿಯಲ್ಲಿ ಮಾತನಾಡುವಾಗ ಅಲ್ಲಿ ಭಾಷೆ ತನ್ನದೇ ಸ್ವತಂತ್ರತೆಯನ್ನು ಪಡೆದಿರುತ್ತದೆ. ಒಟ್ಟಾರೆ ಭಾಷೆಯನ್ನು ಬಿಟ್ಟು ಮಾನವ ಇರುವುದು ಬಹು ವಿರಳ. ಭಾಷೆಯೊಂದಿಗೆ ಸಹಕರಿಸಿದರೆ, ತನ್ನೆಲ್ಲ ಕಾರಣಗಳಿಗೆ, ಸರಿಯಾದ ಮಾಹಿತಿಗಳನ್ನು ತಿಳಿದುಕೊಂಡು ತನ್ನ ನೈಜ ರೀತಿಯಲ್ಲಿ ಸಹಕರಿಸಲು ಭಾಷೆ ಸಹಾಯವಾಗುತ್ತದೆ. ಇಲ್ಲಿ ಮಾನವನ ದೈನಂದಿನ ಚಟುವಟಿಕೆಗಳಿಗೆಲ್ಲ ಭಾಷೆಯೇ ಆಧಾರವಾಗಿರುತ್ತದೆ.

ಬೇರೊಂದು ಭಾಷೆಗಳಿಂದಲೂ ತಾನೂ ವ್ಯಕ್ತಪಡಿಸುತ್ತಿರುವ ಸಂಗತಿಗೆ ಸಹಾಯಕವಾಗಬಲ್ಲದು. ಆದ್ದರಿಂದಲೇ ಭಾಷೆ ಮಾನವನಿಗೆ ಕೈ ಹಿಡಿದು ನಡೆಸುತ್ತದೆ. ಭಾಷೆ ಮತ್ತು ಮಾನವನಿಗೆ ಅವಿನಾಭಾವ ಸಂಬಂಧವಿದೆ ಎಂದು ಈ ಮೂಲಕ ಹೇಳಬಹುದು.

**ಬರವಣಿಗೆ :**

ಕನ್ನಡ ಹಸ್ತಪ್ರತಿಗಳಲ್ಲಿ ಬರವಣಿಗೆಯು ಮೌಲ್ಯಯುತವಾಗಿದೆ. ಕವಿಗಿಂತ ಲಿಪಿಕಾರರಿಗೆ ಈ ಕ್ಷೇತ್ರದಲ್ಲಿ ಅದ್ವಿತೀಯ ಸ್ಥಾನವನ್ನು ನೀಡಿದ್ದಾರೆ. ಲಿಪಿಕಾರರು ಒಬ್ಬ ಆದರ್ಶ ವ್ಯಕ್ತಿಗಳಾಗಿದ್ದು ವೃತ್ತಿಯೇ ಕಾಯಕವೆಂದು ತಿಳಿದುಕೊಂಡು ಲಿಪಿಗೈಯುವುದರಲ್ಲಿ ಆಸಕ್ತರಾಗುತ್ತಿದ್ದರು. ಎಲ್ಲ ಧಾರ್ಮಿಕ ಕಟ್ಟಳೆಗಳ ಮಧ್ಯ ಬರವಣಿಗೆ ಬೆಳೆದು ಬಂದಿದ್ದನ್ನು ನೋಡುತ್ತೇವೆ.

ಧಾರ್ಮಿಕತೆ, ವೈಚಾರಿಕತೆ ಮತ್ತು ಅರಾಜಕತೆಯೇ ಅಂದಿನ ಸಮಾಜದಲ್ಲಿ ತುಂಬಿಹೋಗಿತ್ತು. ಪ್ರತಿಭೆ ದೈವದತ್ತವಾದುದು, ಪೂರ್ವಜನ್ಮ ಸಂಸ್ಕಾರಗಳಿಂದ ಬರುವಂಥದ್ದು ಎಂಬ ಕಲ್ಪನೆಗಳೇ ಆದರ್ಶೀಯವಾದವುಗಳು, ಬುದ್ಧಿಶಕ್ತಿಯು ದೈವ ಸ್ವರೂಪದ್ದು, ಇವೆಲ್ಲವುಗಳನ್ನು ತಮ್ಮ ಅಧಿಕಾರದ ಮದಾಂಧದಿಂದಲೇ ಕಂಡುಕೊಂಡ ಅವೈದಿಕರಂಥ ಹೀನ ಕುಲದವರೊಂದಿಗೆ ವರ್ತಿಸುತ್ತಾ ಅವರನ್ನು ತಮ್ಮ ಆಳ್ವಿಕೆಗೆ ಒಳಪಡಿಸುವಂತೆ, ಅವರ ಅಧಿಕಾರ ಸೂತ್ರಗಳೆಲ್ಲವೂ ತಮ್ಮ ಅಧೀನದಲ್ಲಿರಿಸಿಕೊಂಡು ಹೇಳಿದಂತೆ ಕೇಳಬೇಕೆಂದು ಜಾತೀಯ ಹುನ್ನಾರುಗಳು, ಕಟ್ಟುಕತೆಯ ಕಲ್ಪನೆಗಳು, ದಾಂದಲೆಗಳು, ಗಲಭೆಗಳು, ಮೋಸ ವಂಚನೆಗಳು, ಕೊಲೆ ಸುಲಿಗೆಗಳು, ಇವೆಲ್ಲವುಗಳು ಹಿಂದಿನ ಸಮಾಜದಲ್ಲಿ ತಾಂಡವಾಡುತ್ತಿದ್ದನ್ನು ಕಾಣಬಹುದು.

ಬರವಣಿಗೆಯಂಥ ಕಾರ್ಯದಲ್ಲಿ ದೈಹಿಕ ಶ್ರಮಕ್ಕೆ ಶೂದ್ರರರು, ಬೌದ್ಧಿಕ ಕ್ರಿಯೆಗೆ ಬ್ರಾಹ್ಮಣರು ಕೃತಿ ಜ್ಞಾನಕ್ಕಿಂತ ಸ್ಮೃತಿಜ್ಞಾನ ಅವರಲ್ಲಿ ಪ್ರಧಾನವಾಗಿತ್ತು.

'ದೇವಾದೀನಂ ಜಗತ್ಸರ್ವೇ ಮಂತ್ರಾಧೀನಂ ದೈವಿತಂ।
ತೇ ಮಂತ್ರಾ ಬ್ರಾಹ್ಮಣಾಧೀನಾ ಬ್ರಾಹ್ಮಣ ಮಹದೇವತಂ'.[೨೦]

ಈ ಶ್ಲೋಕದಲ್ಲಿ ಹೇಳುತ್ತಿರುವುದೇನೆಂದರೆ ಇಡೀ ಜಗತ್ತೇ ದೇವರ ಕೈಯಲ್ಲಿದೆ. ಎಲ್ಲ ಮಂತ್ರಗಳು ಬ್ರಾಹ್ಮಣರ ಅಧೀನದಲ್ಲಿವೆ ಎಂದರೆ ಇವರಷ್ಟೇ ಇಂತಹ ವಿದ್ಯೆಯನ್ನು ಕಲಿಯುತ್ತಿದ್ದರು. ಇವರೆಂದರೆ ಪರಮದೇವತೆಗಳು. ಇವರು ಹುಟ್ಟಿನಿಂದಲೇ ವೇದಾಂತಗಳನ್ನು ಬಲ್ಲಂಥವರು. ಬ್ರಾಹ್ಮಣ ಹತ್ತು ವರ್ಷದವನಾದರೂ ನೂರು ವರ್ಷದ ರಾಜನಿಗೆ ಪಿತೃಸಮ. ಬ್ರಾಹ್ಮಣರೇ ದೇವರು, ದೇವರುಗಳೇ ಇವರ ಕೈಯಲ್ಲಿದ್ದಾರೆ. ಜೀವದಾಸೆ ಇರುವವರು ಯಾರು ಇವರನ್ನು ಕೆಣಕಬಾರದು ಎಂಬೆಲ್ಲ ಕಲ್ಪನೆಗಳ ಕಲಾಲೋಕವನ್ನೇ ತಮ್ಮ ಸುತ್ತಲೂ ಪ್ರತಿಬಿಂಬಿಸಿಕೊಂಡಿದ್ದಾರೆ.

ಅರವಿನ ಜ್ಞಾನ ಇತರರಿಗೆ ಸಲ್ಲಬಾರದು. ಶೂದ್ರನಿಗೆ ವಿದ್ಯೆ, ಬುದ್ಧಿ, ಧರ್ಮ, ವ್ರತ ಇವುಗಳೆಲ್ಲವೂ ಹೇಳಬಾರದು, ಒಂದು ವೇಳೆ ಹೇಳಿದರೆ ಹೇಳಿದವನು ಕೇಳಿದವನು ನರಕಕ್ಕೆ ಹೋಗುತ್ತಾರೆ. ಶೂದ್ರನು

ಸೇವೆಗಾಗಿ ಹುಟ್ಟಿದವನು. ಆಸ್ತಿ–ಪಾಸ್ತಿ ಧನಗಳಿಸುವ ಅಧಿಕಾರ, ಸಂಪತ್ತು ಸಂಗ್ರಹಿಸಬಾರದು. ಶೂದ್ರನು ಬ್ರಾಹ್ಮಣನೊಡನೆ ಧರ್ಮದ ಬಗ್ಗೆ ವಾದಮಾಡಬಾರದು. ಮಾಡಿದರೆ ಕಾಸಿದ ಎಣ್ಣೆಯನ್ನು ಮುಖಕ್ಕೆ ಎರಚಬೇಕು. ಎಂಬಂತಹ ಅವಮಾನೀಯವಾದ ಅಹಿತಕರ ಘಟನೆಗಳಿಗೆ ಮಾರು ಹೋಗಿದ್ದರು. ತಾವು ಪವಿತ್ರರು, ಸತ್ಪಾತ್ರರು ಎಂದೂ ಸಾರಿಕೊಳ್ಳುತ್ತಿರುವುದನ್ನು ನೋಡಬಹುದು. ಇಷ್ಟೆಲ್ಲ ಕಾರಣಗಳಿಗೆ ಬದ್ಧನಾಗಿ ಬರಹಕಾರ ಲಿಪಿಗೈದಿರುವುದನ್ನು ನೋಡುತ್ತೇವೆ. ಬರವಣಿಗೆಯೊಂದೇ ಇವರ ಅಧೀನದಲ್ಲಿತ್ತು. ಬರವಣಿಗೆ ಶೈಲಿ ಸ್ವರೂಪ ವಿನ್ಯಾಸಗಳನ್ನು ಅವರು ಕಂಡುಕೊಂಡಿದ್ದರು. 'ಸರಸ ಸಂಗೀತ ನಿಪುಣಂ ಬಹುಲಿಪಿಜ ಭೂಸುರವರ ವಿರೂಪಾಕ್ಷಸುತ ಲಿಂಗ ಮಂತ್ರಪಂ'[20] ಇವರು ಬಹು ನಿಪುಣರಾಗಿದ್ದರು. ಕಲೆ ಸಂಗೀತಶಾಸ್ತ್ರ, ವೇದ–ಪುರಾಣಗಳನ್ನು ಸಕಲಶಾಸ್ತ್ರಗಳನ್ನು ಬಲ್ಲಂಥ ಬಹುಲಿಪಿಕಾರರು, ಇವರಲ್ಲಿ ಸುಂದರಲೇಖನ, ಸಣ್ಣಲಿಪಿಲೇಖನ, ಅಲಂಕಾರಲೇಖನ, ಶೀಘ್ರಲೇಖನ, ಬಹುಲಿಪಿ ಲೇಖನ ಇತ್ಯಾದಿ. ವರ್ಣಮಯವಾಗಿ ಬರೆಯುವಂಥವರು ಇವರಲ್ಲಿ ಕೆಲವೊಬ್ಬರು ವಿರೂಪಾಕ್ಷರ ಮಂತ್ರಿಗಳೂ ಆಗಿದ್ದರು. ಅಲ್ಲದೆ ಈ ಕ್ಷೇತ್ರದಲ್ಲಿ ಬಹುದಿನಗಳಿಂದ ಅಭ್ಯಾಸ ನಿರತರಾಗಿದ್ದವರೆಲ್ಲರೂ ಕಂಡುಬರುತ್ತಾರೆ. ಬರೆಪಕಾರರಲ್ಲಿ ಅಕ್ಷರಗಳನ್ನು ತಮ್ಮದೇ ಆದ ವಿನ್ಯಾಸಗಳಿಂದಲೂ ಲಿಪಿಗೈಯುತ್ತಿದ್ದರು.

'ಪೊಕ್ಕಳು ತಲೆಕಟ್ಟುಮನ।
ನ್ತರದವಯವ ಮನವಿದು ಖಂಡರಿಸಲು ಕೀ।
ಇಕ್ಕುಡನೆ ಬಲ್ಲನರಿಯ।
ರ್ಮಿಕ್ಕವರೆನ್ತೊಸೆದು ಧರಣಿ ಬಣ್ಣಿಸುತಿಕ್ಕುಂ'.[21]

ಅಕ್ಷರಗಳ ತಲೆಕಟ್ಟು, ಒತ್ತಕ್ಷರಗಳು, ಅಕ್ಷರಗಳ ಜೋಡಣೆಗಳು, ಅಕ್ಷರಗಳ ವಿನ್ಯಾಸ, ಅಕ್ಷರಗಳ ಆಕಾರ ಇವುಗಳು ಒಂದೇ ಪಂಕ್ತಿಯಲ್ಲಿದ್ದು, ಇವುಗಳು ಒಂದನ್ನೊಂದು ತಾಕದಂತೆ ಅಕ್ಷರಜೋಡಣೆಗಳಿದ್ದವು. ಅಲ್ಪವಿರಾಮ, ಪೂರ್ಣ ವಿರಾಮಗಳೆಲ್ಲವೂ ಚಾಚುತಪ್ಪದಂತೆ ತಮ್ಮ ಬುದ್ಧಿಯನ್ನು ಗ್ರಹಿಸಿ ಬರೆಯುತ್ತಿದ್ದರು. ಕೌಶಲ್ಯ, ಪ್ರತಿಭೆಗಳೆಲ್ಲವನ್ನ ಇವರ ಬರೆದ ಅಕ್ಷರಗಳ ಮೂಲಕ ಕಂಡುಕೊಳ್ಳಬಹುದು. ಒಂದು ಅಕ್ಷರದ ಒತ್ತು ಮುತ್ತಿನ ಸೆರಗಿನಂತೆ ಸುಂದರವಾಗಿ ಕಾಣುತ್ತವೆ. ಕೆಲವೊಬ್ಬರು ಆ ಕ್ಷರಗಳ ಮಧ್ಯ ಅಲ್ಲಲ್ಲಿ ಉಪಯೋಗಿಸಿದ ಅಕ್ಷರಗಳ ವಿನ್ಯಾಸಗಳು ಪುಷ್ಪ, ಪಕ್ಷಿ, ಪ್ರಾಣಿಗಳಂತೆ, ಒಂದೊಂದು, ಸಾಲಿನಲ್ಲಿ ಒಂದೊಂದು ವರ್ಣಮಯ ಚಿತ್ರಗಳಾಗಿ ಕಾಣುತ್ತಿರುವುದನ್ನು ನೋಡಿದರೆ ಅದೊಂದು 'ಶಿಲೆಯಲ್ಲವಿದು ಇದೊಂದು ಕಲೆ' ಎಂದು ಹೇಳಬಹುದು.

ಬರಹಗಾರರು ತಮ್ಮ ನಿಲುವಿನಲ್ಲಿ ಇಡೀ ಸಂಸ್ಕೃತಿಯ ಬಿಂಬವೇ ಕಾಣುವಂತೆ ಅಕ್ಷರಗಳನ್ನು ಜೋಡಿಸಿ, ವಿಸ್ತರಿಸಿ ಬರೆಯತ್ತಿದ್ದರು. ಇವರು ಬರೆಯುತ್ತಿರುವಾಗ ಒಂದು ಕೈ ಸೋತರೆ ಮತ್ತೊಂದು ಕೈಯಿಂದ ಬರೆಯುತ್ತಿದ್ದರು. ಇವರು ಎರಡು ಕೈಗಳನ್ನು ಬಳಸಿಕೊಂಡು ಲಿಪಿಗೈಯುತ್ತಿದ್ದರು. ಅಂದರೆ ಬರವಣಿಗೆಯ ಮೇಲೆ ಇವರಿಗಿದ್ದ ಆಸಕ್ತಿಯೇ ಕಾರಣ. ವಿಶ್ವನಾಥ, ಮಲ್ಲದೇವರಂಥವರು ಇಂತಹ

ಕಾರ್ಯದಲ್ಲಿ ಆಸಕ್ತರಾಗಿದ್ದರು. ಇವರಿಗಿದ್ದ ಕಾಳಜಿ, ಆತ್ಮವಿಶ್ವಾಸ, ನೈತಿಕತೆ, ತಾಳ್ಮೆ, ಬದ್ಧತೆಗಳನ್ನು ತಾಳೆಗರಿಗಳಂಥ ಅಕ್ಷರಗಳ ಸಾಲುಗಳೇ ಸಾಕ್ಷಿ.

'ಸಮಸ್ತ ಜಗಜ್ಜನೋಪಕಾರಾರ್ಥ ಪೇಳ್ದನ್।
ಸಕಲ ಜಗಜ್ಜನ ಹಿತಾರ್ಥಮಾಗಿ ಪೇಳಿದೆನು'.[೨೩]

ಈ ಕನ್ನಡ ಹಸ್ತಪ್ರತಿಗಳ ಗುಣವೇ ಸಕಲರೆಲ್ಲರೂ ಉಪಯೋಗಿಯಾಗಿರುವಂತವು. ಅದಕ್ಕಾಗಿಯೇ ಏನೆಲ್ಲ ಹೊಸ ಅಂಶಗಳನ್ನು ತಿಳಿಸಿಕೊಡುತ್ತವೆ. ಜನೋಪಕಾರಿಯಾಗಬೇಕೆನ್ನುವ ಬರಹಗಳು ಅಲ್ಲದೆ ಇದರ ಹಿಂದಿನ ಗ್ರಹಿಕೆಗಳನ್ನೆಲ್ಲವನ್ನು ನೇರವಾಗಿ ತಿಳಿಸಿಕೊಡುವುದು. ಅವಿಭಕ್ತ ಪ್ರಜ್ಞೆಯ ಜಗತ್ತು ಅರ್ಥಪೂರ್ಣ ಸ್ವಾವಲಂಬನೆಗಳು, ಆದರ್ಶೀಯ ನಿಲುವುಗಳನ್ನು ತಿಳಿಸುವುದಲ್ಲದೆ, ಮಾನವನ ಮನಸ್ಸಿನ ಆಲೋಚನೆಗಳು ನೇರವಾಗಿ ಹೀಗೆ ಇರಬೇಕೆಂದೂ ತಿಳಿಸಿಕೊಡುತ್ತವೆ. ಇಂತಹ ಹಸ್ತಪ್ರತಿಗಳು ಆಯುರಾರೋಗ್ಯಭಾಗ್ಯ, ಸಂತಾನಪ್ರಾಪ್ತಿ, ಸಕಲೈಶ್ವರ್ಯ, ಜೀವನಸುಖ, ಮನೋಭಿಷ್ಟ ಕಾರ್ಯಸಿದ್ಧಿ, ಜ್ಞಾನಾರ್ಜನೆ, ಜ್ಞಾನರಕ್ಷಣೆ, ಅನಿಷ್ಟ ನಿವಾರಣೆ, ಕರ್ಮೋಪಶಮನ, ಸಾಧನ ಸಿದ್ಧಿ, ಸ್ವಪರ ಸುಖದ ಹಾರೈಕೆ ಮತ್ತು ಸಂಪ್ರೀತಿ ಇವುಗಳಿಗೆಲ್ಲ ಕ್ರಿಯಾತ್ಮಕವಾಗಿ ಈಡೇರಿಸಿ ಮಾನವನಿಗೆ ಜೀವನೋಪಕಾರಿಯಾಗಿ ಇರುವುದಲ್ಲದೆ 'ಸಂಜೀವಿ ವೃಕ್ಷದಂತೆ' ಸಕಲ ಕಾರ್ಯಗಳಲ್ಲಿಯೂ ಸಹಾಯ ಮಾಡುತ್ತಿರುವುದನ್ನು ಕಂಡುಕೊಳ್ಳುತ್ತೇವೆ.

ಬರವಣಿಗೆಯಲ್ಲಿ ಹಲವಾರು ಲಿಪಿಕಾರರು ಕಾರ್ಯಗೈಯುತ್ತಿದ್ದರು. ಕುಶಲಕರ್ಮಿಗಳಾದ ಬಡಿಗ, ಕಮ್ಮಾರ, ಲೋಹಾರ, ವಸ್ತ್ರದ, ಒಲೆಯುವ, ಚಿತ್ರಕ, ಲಿಪಿಕಾರ, ಬರೆಪಕಾರರಂಥ ವೃತ್ತಿವರ್ಗಗಳೆಲ್ಲ ಈ ಕಾರ್ಯಕೈಗೊಂಡವರಾಗಿದ್ದರು. ಇವರ ತಂಗುದಾಣಗಳೆಂದರೆ ಸಾಲಿಮಠ, ಓಲೆಮಠ, ಟೀಕಿನ ಮಠಗಳಂತಹ ಸಂಸ್ಥೆಗಳು. ಗೃಹ ಉದ್ಯಮಗಳು ಇಂತಹ ಕುಶಲಕಾರರ ಕಲಿಕೆಯ ಮತ್ತು ಉಪಜೀವನದ ತಾಣಗಳಾಗಿದ್ದವು. ಆದರೂ ಕೂಡ ಇವರಿಗೊಂದು ಪ್ರತ್ಯೇಕ ತಾಣವನ್ನು ಅಂದಿನ ಸಮಾಜ ಕಲ್ಪಿಸಿಕೊಟ್ಟಿಲ್ಲ. ಇವರು ಶ್ರದ್ಧೆ, ಆತ್ಮೀಯತೆ, ಸಹೋದರತೆ, ಕಠಿಣತೆ, ಮುಗ್ದತೆಗಳೆಲ್ಲವುಗಳನ್ನು ನೇರವಾಗಿ ಇಂದಿನ ದಿನಗಳಲ್ಲಿಯೂ ಇವರ ಮಾಡಿದ ಸಾಹಸ ಸಾಧನೆಗಳೇ ಇಂದಿಗೂ ಅಮರ.

ಭಾಷೆಯನ್ನು ಸರಳ ಅಕ್ಷರಗಳಿಂದ ಬಳಸುತ್ತಿದ್ದರು. ಜನರ ವಚನಕಾರರಿಂದ ಹಿಡಿದು ತತ್ವಪದಕಾರವರೆಗೂ ಎಲ್ಲರೂ ಸಾರ್ವಜನಿಕರಿಗೆ ತಿಳಿಯಪಡಿಸುವಂತೆ ಭಾಷೆಯನ್ನು ಬಳಸಿಕೊಂಡಿದ್ದರು. ಇಲ್ಲಿ ಸಾಮಾನ್ಯವಾಗಿ ಬಳಕೆಯಾಗುವುದು ವಾಲೆ, ವಾಲಗ, ವೊಳಗೆ, ಗ್ರಹ, ರಕ್ಷಿ, ಆಯಿದು, ಯಿದು, ಯಿರಬ್ಯಾಡ, ವೊಂದು ಇತ್ಯಾದಿ ಪದರೂಪಗಳನ್ನು ಬರವಣಿಗೆಯ ದಿನ ಬಳಕೆಯ ಮಾತಿನಲ್ಲಿಯೂ ಕೂಡ ಬಳಸುತ್ತಿದ್ದರು. ಇದರಿಂದ ಸಮಾಜದಲ್ಲಿ ಭಾಷೆ ತನ್ನದೇ ಆದ ನೆಲೆಯನ್ನು ಕಂಡುಕೊಂಡಿತ್ತು.

ಈ ಬರವಣಿಗೆಯು ಕೆಲವೊಂದು ಕಥೆಗಳಲ್ಲಿ, ಸಾಹಿತ್ಯದಲ್ಲಿ, ವಿಮರ್ಶೆಯಲ್ಲಿ, ಕಲೆಯಲ್ಲಿ, ನಾಟ್ಯರಂಗದಲ್ಲಿ, ಹೀಗೆ ವಿಭಿನ್ನವಾಗಿ ತನ್ನದೇ ಆದ ಭಾವನೆಗಳೊಂದಿಗೆ ಅಭಿವ್ಯಕ್ತಿಗೊಳ್ಳುತ್ತದೆ. ಕಥಾ ಸನ್ನಿವೇಶದಲ್ಲಿ ಬರವಣಿಗೆಯ ಪಾತ್ರವನ್ನು ಒಂದೆಡೆ ನೋಡಬಹುದು. ರಾಜಕುಮಾರಿಯರು

ರಾಜಕುಮಾರನಿಗಾಗಿ ಕಾಯುತ್ತಾ ಒಂದು ದೇವಾಲಯದಲ್ಲಿ ಕಾದುಕುಳಿತಿದ್ದರು. ರಾಜಕುಮಾರಿ, ಚಂದ್ರನಖಿ, ನಿಲೋತ್ಪಲೆ ಮತ್ತು ಮೃದುವಾಣಿ ಇವರು ಒಂದೊಂದು ಆಲಯದಲ್ಲಿ ತಂಗಿದ್ದರು. ಅದೇ ಸಮಯಕ್ಕೆ ಹರದನೊಬ್ಬ (ಸಂಚಾರಿ) ಬರುತ್ತಾನೆ. ರಾಣಿ ಮಂದ ಬೆಳಕಿನಲ್ಲಿ ಕುಳಿತಿದ್ದಳು. ಇವನನ್ನು ನೋಡಿ ನಭೋಕ್ತ ಎಂಬ ಚೀಟಿಯನ್ನು ಓದುತ್ತಾ, ಹರದನ ಕೈ ಹಿಡಿಯುತ್ತಾಳೆ. ಇದರ ನೆನಪಿಗಾಗಿ ತನ್ನ ಚೆಳ್ಳುಗುರಿನಿಂದ 'ಕ್ರಿಯತೆ ಕರ್ಮ' ಎಂದು ಬರೆದು ಕೊಡುತ್ತಾಳೆ. ಅಷ್ಟರಲ್ಲಿಯೇ ಉಪಾಧ್ಯಾಯರ ಮಗ ಒಂದು ಇವನನ್ನು ಇನ್ನೊಂದು ಆಲಯಕ್ಕೆ ಹೋಗುವಂತೆ ಒತ್ತಾಯಿಸುತ್ತಾನೆ. ಅಲ್ಲಿಯೂ ರಾಜಕುಮಾರಿಯರು 'ಕಲ್ಪಕೋಟಿ ಶತೈರಪಿ; ಆವಶ್ಯ ಮನಭೋಕ್ತವ್ಯಂ', 'ಕೃತಂ ಕರ್ಮ ಶುಭಾಶುಭಂ' ಎಂದು ರಾಜಕುಮಾರಿಯರು ತಮ್ಮ ಚೆಳ್ಳು ಗುರಿನಿಂದ ಬರೆದ ಬರವಣಿಗೆಯೇ ಆಧಾರವಾಗಿ ಹರದನು ರಾಜಕುಮಾರಿಯರನ್ನು ಕೈಹಿಡಿಯುತ್ತಾನೆ. ಕತ್ತಲಿನಲ್ಲಿ ಬರೆದ ಬರವಣಿಗೆ ಬೆಳಕಿನಲ್ಲಿ ನಿಲ್ಲುವಂತೆ ಸಹಾಯವಾಗುತ್ತವೆ. ಇಲ್ಲಿ ಮಾತಿಗಿಂತ ಲಿಖಿತರೂಪಗಳಿಗೆ ಹೆಚ್ಚು ಮಹತ್ವ ಕೊಟ್ಟಿರುವುದನ್ನು ಅಂದಿನಿಂದ ಇಂದಿನ ವರೆಗೂ ನೋಡಬಹುದು. ಬರವಣಿಗೆಯ ಸಾಮಾಜಿಕ, ಆರ್ಥಿಕ, ಆಧಿಕಾರದ ನೆಲೆಗಳು ಮತ್ತು ಸಾಮೂಹಿಕ ಜವಾಬ್ದಾರಿ ಎಂಥದ್ದು ಎಂಬುದನ್ನು ಬರೆದ ಬರವಣಿಗೆಗಳೇ ಸಾಕ್ಷಿ. (ದುರ್ಗಸಿಂಹ ಬರೆದ ಪಂಚತಂತ್ರ ಕಥೆಗಳಲ್ಲಿ ಸುನೂತಿ ವಿಧನೆಂಬ ಬ್ರಾಹ್ಮಣ ಉಪಾಧ್ಯಾಯನ ಕಥೆ ಹಲಗೆ ಬಳಪ, ಪು.೪೯)

ಬರವಣಿಗೆ ಮತ್ತು ಲಿಪಿಕಾರರ ಮೇಲೆ ಅನೇಕ ಧಾರ್ಮಿಕ ಒತ್ತಡಗಳು ಪ್ರಭಾವ ಬೀರಿವೆ. 'ವೇದಗಳನ್ನು ಬರೆದಿಡುವವರು ನರಕಕ್ಕೆ ಹೋಗುತ್ತಾರೆ' ಎಂಬುದು ಮಹಾಭಾರತದಲ್ಲಿ ಒಂದೆಡೆ ಸೂಚಿಸಿದ್ದಾರೆ. ಜ್ಞಾನವು ಏಕವ್ಯಕ್ತಿಗೆ ಸಂಬಂಧಿಸಿದ್ದಾಗಬೇಕು. ಮತ್ತು ಸ್ವರ್ಗ ನರಕ. ಪಾಪ ಪುಣ್ಯಗಳು, ಬ್ರಮೆ, ಕಲ್ಪನೆಗಳನ್ನೇ ಅವೈದಿಕೇತರ ಮೇಲೆ ಹೊರೆಸಿ ಇವರ ಸಂಸ್ಕೃತಿಯನ್ನೇ ಮೂಲೆ ಗುಂಪಾಗಿ ಮಾಡುವ ಕುತಂತ್ರ, ಕುಹುಕಬುದ್ಧಿಯನ್ನು ವೈದಿಕರು ಬಿತ್ತುತ್ತಿರುವುದನ್ನು ನೋಡಬಹುದು. 'ಬರವಣಿಗೆಯನ್ನು ಬರೀಹಾಳು ಹರಟೆಗಾಗಿ, ವೃಥಾಕಾಲಹರಣಕ್ಕಾಗಿ ಕಲಿಯುವುದಲ್ಲ, ಅದು ಪವಿತ್ರ ಗ್ರಂಥಗಳನ್ನು ಪ್ರತಿ ಮಾಡುವ ಒಂದು ಉಪಯುಕ್ತ ವೃತ್ತಿ. ಬೌದ್ಧ ಸನ್ಯಾಸಿಗಳಿಗೆ ಈ ಕಲೆಯನ್ನು ಅಧ್ಯಯನಿಸಲು ಅನುಮತಿ ನೀಡಿದ ಸಂಗತಿಯನ್ನು ಎತ್ತಿ ಹೇಳುತ್ತದೆ'.[೨೪] ಜೈನ ಮತ್ತು ಬೌದ್ಧರ ಕಾಲದಲ್ಲಿ ಲಿಪಿಕಾರರಿಗೆ ವಿಶೇಷ ಪ್ರೋತ್ಸಾಹ ಕೊಟ್ಟಿದ್ದಾರೆ. ಬರವಣಿಗೆಯು ಅಭ್ಯಾಸದೊಂದಿಗೆ ಬರುವಂತದ್ದು. ಅವರನ್ನು ಯಾರು ಪರಿಗಣಿಸುವಂತಿಲ್ಲ. ಅವರ ಶ್ರದ್ಧೆ, ಶ್ರಮ, ಪೂರ್ವಿಕರಿಂದ ಬಂದ ವಿಚಾರಗಳು ಅಷ್ಟೇ ಸರ್ವ ಸತ್ಯ ಸಂಪನ್ಮೂಲಗಳು. ಅವರ ವ್ಯಕ್ತಿತ್ವಕ್ಕೆ ಯಾರು ಅಡ್ಡಿಪಡಿಸಬಾರದು. ಬರೆದಿರುವ ಅಕ್ಷರಗಳ ಸಾಲುಗಳೇ ಇಂದಿಗೂ ನಾವೆಲ್ಲರೂ ನಮ್ಮ ಕೈಯಲ್ಲಿ ಹಿಡಿದು ಓದಲು ಸಾಧ್ಯ. ಇಲ್ಲದೆ ಹೋದರೆ ಅಕ್ಷರಗಳನ್ನೇ ಕಾಣದೆ ಕತ್ತಲಿನಲ್ಲಿ ಜೀವನವನ್ನು ಕಳೆಯುವ ಸ್ಥಿತಿ ಒದಗುತ್ತಿತ್ತು. ಇವರು ಒಬ್ಬ ಆದರ್ಶ ವ್ಯಕ್ತಿಗಳಾಗಿದ್ದರು ಎಂಬುದಕ್ಕೆ ಅವರ ಕೈ ಬರಹದ ಕೃತಿಗಳೇ ಸಾಕ್ಷಿ.

'ಜೈನ ಸಂಪ್ರದಾಯದ ಪ್ರಕಾರ ಆದಿವೃಷಭ ತೀರ್ಥಂಕರನೇ ಬ್ರಾಹ್ಮಿಲಿಪಿಯನ್ನು ಸೃಷ್ಟಿಸಿದವನು. ಅವನು ತನ್ನ ಮಗಳಾದ ಬ್ರಾಹ್ಮಿಗೆ ಬಲಗೈಯಲ್ಲಿ ಲಿಪಿಗಳನ್ನು ಇನ್ನೊಬ್ಬ ಮಗಳಾದ ಸೌಂದರಿಗೆ ಎಡಗೈಯಲ್ಲಿ ಗಣಿತವನ್ನು ಭೋದಿಸಿದನೆಂದು ಜೈನ ಗ್ರಂಥಗಳು. ಹೇಳುತ್ತವೆ.'[೨೫] ಉತ್ತರ ಭಾರತದಲ್ಲಿ ಕಾಯಕಸ್ಥರು ಬರವಣಿಗೆಗೆ ಕಾರಣರಾದರೆ, ಕರ್ನಾಟಕದಲ್ಲಿ ಜೈನಧರ್ಮದವರು ಕಾರಣರಾಗಿದ್ದಾರೆ. ತಮ್ಮ ಮಕ್ಕಳಿಗೆ ಲಿಪಿಯನ್ನು ಬೋಧಿಸಿದ್ದು, ಅಲ್ಲದೆ ಸ್ತ್ರೀಯರು ಮೊದಲೇ ಅಕ್ಷರ ಜ್ಞಾನ ಪಡೆದುಕೊಂಡಿದ್ದರು. ಅಕ್ಷರ ಕಲಿಯುವುದು ಅಷ್ಟೇ ಕಠಿಣಕರವಾಗಿತ್ತು. ಶೂದ್ರರು ಇಂತಹ ಕೆಲಸಗಳಿಗೆ ಸೀಮಿತರು ಎಂಬುದನ್ನು ಕಿತ್ತೊಗೆದು ಅವರೊಬ್ಬ ಶ್ರಮ ಜೀವಿಗಳಾಗಿದ್ದರು. ವೃತ್ತಿ 'ಪ್ರವೃತ್ತಿ'ಯಾಗಿಯೂ ಬೆಳೆದುಕೊಂಡು ಬಂದಿದೆ. ಬರೆವ ವೃತ್ತಿಯನ್ನು 'ಮಸಿ' ಕಾಯಕವೆಂದು ತಿಳಿದುಕೊಂಡು ತಮ್ಮ ಕಾರ್ಯಗಳಲ್ಲಿ ನಿಪುಣರಾಗುತ್ತಿದ್ದರು.

ಬರವಣಿಗೆಕಾರರು ಕೃತಿಯನ್ನು ಬರೆಯುವಾಗ ಮೊದಲಿಗೆ ದೇವರ ಸುತ್ತಿಗಳನ್ನು ಬರೆಯುತ್ತಿದ್ದು, ಅವರೇ ಆರಾಧಕರೆಂದು ಭಾವಿಸಿಕೊಂಡು ತಮ್ಮ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ಪ್ರಾರಂಭದ ದಿನಗಳು ಶುಭದಿನಗಳಾಗಿದ್ದು, ಅಂತ್ಯದಲ್ಲಿಯೂ ಶುಭ ದಿನಗಳಲ್ಲಿಯೇ ಮುಕ್ತಾಯ ಮಾಡುತ್ತಿದ್ದರು. ತಮ್ಮ ಆರಾಧ್ಯ ಗುರುಗಳ ಸನ್ನಿಧಾನಗಳಲ್ಲಿ ಕಾವ್ಯಾಸಕ್ತರಾಗಿ ಸತತ ಅಭ್ಯಾಸ ಗೈಯುತ್ತಿರುವಾಗ ತಮ್ಮೆಲ್ಲ ಇಂದ್ರಿಯ ಬುದ್ಧಿ, ಭಾವಗಳ ಕಣ್ಣುಗಳು, ಕೈಗಳನ್ನು ಆ ಸಾಕ್ಷತ್ ಗುರುಗಳೇ ತಾನಾಗಿದ್ದಾನೆಂದುಕೊಂಡು ಅಭ್ಯಾಸದಲ್ಲಿ ತೊಡಗುತ್ತಿದ್ದರು. ಬರಹಗಾರರು ಬರೆದ ಅಕ್ಷರಗಳು ಎಷ್ಟು ಕಾಲವಿರುವುವೋ ಅಷ್ಟು ಕಾಲ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ. ಇವುಗಳನ್ನು ಯಾರು ವಾಚನ ಮಾಡುವವರೋ ಅವರು ಸ್ವರ್ಗದಲ್ಲಿ ಪೂಜಿತರಾಗುತ್ತಾರೆ. ಇನ್ನು ಕೆಲವೊಬ್ಬ ಬರೆಪಕಾರರು ತಮ್ಮ ಕುಟುಂಬದ ಪೋಷಣೆಗಾಗಿ, ವೇತನಕ್ಕಾಗಿ, ಬರೆಯುವಂಥವರಿಗೆ ಬದುಕಿನಲ್ಲಿ ಧನ, ವಸ್ತ್ರಲಾಭ ಉಂಟಾಗುವುದಿಲ್ಲ. ಅಕ್ಷರಗಳನ್ನು ಯಾರು ಬಹಿಷ್ಕರಿಸುತ್ತಾರೋ, ನಿರಾಕರಿಸುತ್ತಾರೋ ಅವರು ಬರೆದ ಅಕ್ಷರಗಳು ಇರುವರೆಗೂ ಅವರು ರೌರವ ನರಕದಲ್ಲಿ, ಮಲದಲ್ಲಿ ಹುಳುವಾಗಿಯೂ ಒದ್ದಾಡುತ್ತಾನೆಂಬ ನಂಬಿಕೆ.

**ದೈವೀ ನೆಲೆಗಳು :**

ಕನ್ನಡ ಹಸ್ತಪ್ರತಿಗಳನ್ನು ಇಂದಿಗೂ ಆರಾಧಿಸುತ್ತಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಯ ದೈವೀನೆಲೆಗಳು ಎಂದರೆ ಹಸ್ತಪ್ರತಿಗಳು ದೇವರು ಹಾಗೂ ಧರ್ಮ ಸ್ವರೂಪಿಯಾಗಿ ನೋಡುವುದು ಎಂದರ್ಥ. ವ್ಯವಸ್ಥಿತವಾಗಿಡಲು ದೇವರ ಜಗುಲಿಗಳು, ಗದ್ದುಗೆಗಳು, ಮಹಡಿಗಳು, ಉಪ್ಪರಿಗೆಗಳು, ಪೆಟ್ಟಿಗೆಗಳು, ಮನೆಯ ಜಗುಲಿಗಳು ಮತ್ತು ಮನೆಯ ಜಂತಿಗಳಲ್ಲಿ ವ್ಯವಸ್ಥಿತವಾಗಿ ಶೇಖರಿಸಿ ಇಡುವುದು. ಕನ್ನಡ ಹಸ್ತಪ್ರತಿಗಳೆಂದರೆ ಮಾನವನ ಮನಸ್ಸಿನಲ್ಲಿಯ ಆಲೋಚನೆಗಳನ್ನು ಹುಟ್ಟುಹಾಕುವುದರಲ್ಲಿ ಅತ್ಯಮೂಲ್ಯ ಆಕರಗಳಾಗಿವೆ. ಸಾಹಿತ್ಯ, ಧರ್ಮ, ಕಲೆ, ಆಚರಣೆಗಳು, ನೀತಿ ನಿಯಮಗಳು, ಸಮುದಾಯ, ಪರಿಸರ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಪ್ರಕ್ರಿಯೆಗಳನ್ನೊಳಗೊಂಡಿವೆ. ಇಂದಿನ ಪ್ರತಿಯೊಂದು ಕಾರ್ಯಗಳಲ್ಲಿ ಮಾನವನಿಗೆ ಸಹಕಾರಿಯಾಗಿವೆ.

ಹಸ್ತಪ್ರತಿಗಳನ್ನು ಕೆಲವೊಂದು ಮಠಗಳಲ್ಲಿ ದೈವೀಸ್ಥಾನದಲ್ಲಿ ಇಡಲಾಗಿದೆ. ಕೊಡೇಕಲ್ಲು, ಚೆನ್ನಬಸವೇಶ್ವರ ಮಠ, ಬಾಗಲಕೋಟೆಯ ಅಮೀನಗಡದ ಪ್ರಭುರಾಜೇಂದ್ರ ಮಠ ಮತ್ತು ಇತರೆ ವೀರಶೈವ ಮಠಗಳಲ್ಲಿ ಇಂದಿಗೂ ಹಸ್ತಪ್ರತಿಗಳನ್ನು ಗದ್ದುಗೆಗಳ ಮೇಲಿಟ್ಟು ಪೂಜಿಸುತ್ತಾರೆ. ಅಲ್ಲದೆ ಮನೆಯಲ್ಲಿ ಜಗುಲಿಗಳ ಮೇಲಿಟ್ಟು ಪೂಜಿಸುವುದನ್ನು ಕಾಣುತ್ತೇವೆ. ವೀರಶೈವ ಮಠಗಳಲ್ಲಿ ಅಧಿಕಾರ ವಹಿಸಿಕೊಳ್ಳುವಾಗ ಪ್ರತಿಯೊಬ್ಬ ಸ್ವಾಮಿಯವರಿಗೆ ಮೊದಲು ಹಸ್ತಪ್ರತಿಗಳನ್ನು ನೀಡುತ್ತಾರೆ. ಕಾರಣ ಹಸ್ತಪ್ರತಿಗಳಂತೆ ತಮ್ಮೆಲ್ಲ ಜವಾಬ್ದಾರಿಯನ್ನು ವಹಿಸಿಕೊಂಡು ಎಲ್ಲರೊಂದಿಗೆ ಸ್ನೇಹಮಯವಾಗಿ, ದಕ್ಷತೆಯಿಂದ ಕಾರ್ಯಕೈಗೊಳ್ಳಲಿ ಎಂಬುದು ನಂಬಿಕೆ.

ತಾಳೆಗರಿಗಳನ್ನು 'ತ್ರಿಮೂರ್ತಿ ಸ್ವರೂಪ' ಎಂದು ಭಾವಿಸಲಾಗಿದೆ. ಹಸ್ತಪ್ರತಿಗಳಿಗೆ ಕಟ್ಟುವ ದಾರವನ್ನು ವಾಸುಕೀ ಎಂದೂ, ಅಗಲ ಮತ್ತು ಉದ್ದವನ್ನು ಬ್ರಹ್ಮನೆಂದೂ, ಅಕ್ಷರಗಳನ್ನು ಮಹಾವಿಷ್ಣುವೆಂದೂ, ಹೃಸ್ವ ದೀರ್ಘಾಧಿ ಮಾತ್ರೆಗಳಿಗೆ ಮೂಲಪ್ರಕೃತಿಯೆಂದೂ, ಲಿಪಿಯನ್ನು ಮಹೇಶ್ವರನೆಂದೂ, ಅಕ್ಷರಗಳ ಮಾತ್ರೆಗಳಿಗೆ ಸರಸ್ವತಿ ಎಂದು ಹೇಳಲಾಗಿದೆ. ಹೀಗೆ ಒಂದೊಂದು ವಸ್ತುವಿಗೂ ದೇವರ ಸ್ಥಾನ ನೀಡಿ ಗೌರವಿಸುತ್ತಾರೆ. ಅಲ್ಲದೆ ಮೂವತ್ತೆರಡು ಅಂಗುಲ ಉದ್ದವಿರುವುದು ಉತ್ತಮ ಪುಸ್ತಕ, ಅದು ಮಹಾವಿಷ್ಣುವಿನ ಸ್ವರೂಪ, ಇಪ್ಪತ್ನಾಲ್ಕು ಅಂಗುಲ ಉಳ್ಳದ್ದು ಮಧ್ಯಮ ಅದು ಧರ್ಮ ಕಾಮ ಫಲಗಳನ್ನು ನೀಡುತ್ತದೆ. ಅದು ಶಂಕರ ಸ್ವರೂಪ, ಎಂಟು ಅಂಗುಲವುಳ್ಳದ್ದು ಕನಿಷ್ಟ ಅದು ತ್ರಿವರ್ಗ ಫಲಕೊಡುವ ಬ್ರಹ್ಮಸ್ವರೂಪವೆಂದು ಕರೆದಿದ್ದಾರೆ.

ಈ ತಾಳೆಗರಿಗಳಿಗೆ ಅಳತೆಗಳಂತೆ, ಮನೆಯ ತಳಪಾಯ ಹಾಕುತ್ತಿರುವುದು ಇದೇ ಆಧಾರದ ಮೇಲೆಯೇ ಎಂದು ಹೇಳಬಹುದು. ತಾಳೆಗರಿಗಳನ್ನು ಪೋಷಿಸಲು ಕೆಲವೊಂದು ಸೂತ್ರಗಳನ್ನು ಉಪಯೋಗಿಸುತ್ತಿದ್ದರು. ಸರಿಯಾಗಿ, ಜೋಡಿಸಲು ತಾಳೆಗರಿಗಳಿಗೆ ರಂಧ್ರ ಮಾಡುತ್ತಿದ್ದರು. ರಂದ್ರ ಮಧ್ಯದಲ್ಲಿ ಮಾಡಿದರೆ ಆಯಸ್ಸು ಕುಗ್ಗುವುದು, ತೀರಾ ಕೊನೆಯಲ್ಲಿ ಮಾಡಿದರೆ ಸೌಖ್ಯನಾದ. ಒಂದು ರಂದ್ರ ಮಾಡಿದರೆ ಬಲಿ, ಎರಡು ರಂಧ್ರ ಮಾಡಿದರೆ ಜಯ ಎಂದು ಹೇಳುತ್ತಿದ್ದರು. ಬರೆದ ತಾಳೆಗರಿಗಳ ಮೇಲೆ ಬಣ್ಣವನ್ನು ಲೇಪಿಸುತ್ತಿದ್ದರು. ಕರಿಯ ಬಣ್ಣ ಲೇಪಿಸಿದರೆ ಕರ್ತೃವಿಗೆ ವಾಯುರೋಗ, ಪಳದಿಬಣ್ಣ ಹಾಕಿದರೆ ಕರ್ತೃವಿಗೆ ವಾಯುರೋಗ ನಿವಾರಣೆ, ಕೆಂಪುಬಣ್ಣ ಸಂಮೃದ್ಧಿ, ಕೃಷ್ಣಬಣ್ಣ ಸಂಪತ್ತು ಸೂಚಿಸುತ್ತದೆ. ರಕ್ಷಣೆಗಾಗಿ ಮೇಲೆ ಕೆಳಗೆ ಒಂದೊಂದು ತೆಳುವಾದ ಹಲಗೆಗಳು ಆ ಹಲಗೆಗಳ ಮೂಲೆ ಮೂಲೆಗೂ ದೇವಾಲಯದಂತೆ. ಚಿತ್ರಗಳನ್ನು ಸ್ಫಟಿಕ ವರ್ಣಗಳಂತೆ ಜೋಡಿಸುತ್ತಿದ್ದರು. 'ಬಿಂದು ವಿಸರ್ಗ ದಡ್ಡತೆವೊಂದಿದಾವೃತೋರ್ದ್ವ ರೇಫೆ ದೀರ್ಘ ದಿಂದೋಪ್ಪುತ್ತಿರ್ದ ಅಕ್ಷರ ಮೂರ್ತಿಗಳಂ ಮಾಡೆಂದು ಆದೇಶಿಸಲು ಆಚಾರ್ಯ ಚಿಕ್ಕಯ್ಯನವರ ನಿರೂಪದಂತೆ ಬರೆಯಲು ತನ್ನ ಕಣ್ಣು, ನಾಲಿಗೆ, ಕೈ, ಕವಿ, ಗತಿ, ಮಲೆ, ಚೈತನ್ಯಕ್ಕೆ ಸದ್ಭಕ್ತ ವೀರಮಾಹೇಶ್ವರರೇ ಕರ್ತರೆಂದೂ ಅವರ ಕರುಣ ಪ್ರಸಾದವಂ ಕೈಕೊಂಡು ಬರೆದುದಲ್ಲದೆ ನನ್ನಿಚ್ಚೆಯೊಳು ನಾಂ ಬರೆದುದಿಲ್ಲ ಎಂದು ಹೇಳಿಕೊಳ್ಳುತ್ತಾನೆ'.[೨೬] ಬರಹಗಾರ ತನ್ನ ದೈನ್ಯತೆ, ಭಾವನೆಗಳನ್ನು ತನ್ನ ಗುರುಗಳ ಮುಂದೆ ಹೇಳಿಕೊಳ್ಳತ್ತಾನೆ. ತಾನೂ ಕಾರ್ಯದಲ್ಲಿ

ತೊಡಗುವಾಗ ತನ್ನೆಲ್ಲ ಪಂಚೇಂದ್ರಿಯಗಳನ್ನು ಗುರುವಿಗೆ ಅರ್ಪಿಸುತ್ತಾನೆ. ಆತನೇ ನಮಗೆ ಕಾರಣಕರ್ತರು. ಅವರ ಆಶೀರ್ವಾದ ಪಡೆದುಕೊಂಡು ಹೇಳಿಕೊಳ್ಳುತ್ತಾನೆ. ಬರವಣಿಗೆ ಬರೆಯುವುದೆಂದರೆ ಬರೀ ಹಾಳು ಹರಟೆಗಾಗಿ ಅಲ್ಲ, ವೃಥಾಕಾಲಹರಣಕ್ಕಾಗಿ ಅಲ್ಲ, ಪವಿತ್ರಗ್ರಂಥಗಳನ್ನು ಪ್ರತಿಮಾಡುವುದು, ತನ್ನ ಮುಂದಿನ ಜನಾಂಗಕ್ಕಾಗಿ ದಾರಿದೀಪಗಳಾಗುವಂತೆ, ಮಾರ್ಗಗಳಾಗಿ, ಮುನ್ಸುಚನೆಯ ಹೊಸ ಅಂಶಗಳತ್ತ ಮುನ್ನುಗ್ಗಲು ಪ್ರೇರೇಪಿಸುತ್ತದೆ.

ತಾಳೆಗರಿಗಳ ಮೇಲೆ ಬರೆದ ಬರವಣಿಗೆ ಅಷ್ಟೇ ಪೂಜ್ಯನೀಯವಾದ ಭಾವನೆಗಳೆಂದು ನೋಡಬೇಕಾಗಿದೆ. ಬರವಣಿಗೆ ಪ್ರಾಮುಖ್ಯತೆ ಇವುಗಳ ಹಿಂದೆ ಬಹುಜನ ಲಿಪಿಕಾರರ ಶ್ರಮ ಅಡಗಿರುತ್ತದೆ. ಪಾಲನೆ, ಪೋಷಣೆ, ರಕ್ಷಣೆಗಳೊಂದಿಗೆ ನಾಲ್ಕುತಿಂಗಳ ನಂತರ ಸಾಧನಗಳನ್ನಾಗಿ ಬಳಸುತ್ತಿದ್ದರು. ಲಿಪಿಗೈದ ಮೇಲೆ ಬಣ್ಣ ಲೇಪಿಸುವುದರೊಂದಿಗೆ ಹೊರ ಬರಲು ಯಶಸ್ವಿಯಾಗುತ್ತಿದ್ದವು. ಈ ಬರವಣಿಗೆ ಇಂದೆಂದಿಗೂ ಅವಿನಾಶಿ ಮತ್ತು ಎಂಟನೂರಾ ಒಂದು ಗುಣಗಳನ್ನು ಪಡೆದುಕೊಂಡಿದೆ. ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿಸುವ ಗುಣವು ಒಂದಾಗಿದೆ ಎಂದು 'ತಾಳವಿಲಾಸ' ಎನ್ನುವ ತಮಿಳು ಕೃತಿ ವ್ಯಕ್ತಪಡಿಸುತ್ತದೆ. ತಾಳೆಗರಿಗಳ ಮೇಲಿನ ಬರವಣಿಗೆ ಒಂದು ಸಾವಿರ ವರ್ಷದವರೆಗೂ ಜೀವಂತವಾಗಿ ಅಕ್ಷರಗಳು ಇರುತ್ತವೆ ಎಂಬುದು ನಂಬಿಕೆ.

ತಾಳೆಗರಿಗಳು ಕೆಲವು ಪ್ರಮುಖ ಮಾಹಿತಿಗಳನ್ನು ಸಂಗ್ರಹಿಸಲೂ ಉಪಯೋಗಿಸುತ್ತಿದ್ದರು. ಆಯುಷ್ಯವೂ ಗಟ್ಟಿಯಾಗಿರಬೇಕು ಎನ್ನುವುದರ ಇವರ ನಿಲುವಾಗಿತ್ತು. ಬರೆಯುತ್ತಿರುವಾಗ ಒಳ್ಳೆಯ ಶುಭದಿನಗಳಲ್ಲಿಯೇ ಪ್ರಾರಂಭಿಸಿ ಒಳ್ಳೆಯ ದಿನದಲ್ಲಿಯೇ ಮುಕ್ತಾಯಗೊಳಿಸುತ್ತಿದ್ದರು. ಲಿಪಿಗೈಯುತ್ತಿರುವಾಗ ಶುಚಿರ್ಭೂತರಾಗಿ, ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ಕಾರ್ಯ ನಿರ್ವಹಿಸುತ್ತಿದ್ದರು. ಬರವಣಿಗೆಯ ಮೊದಲನೆಯ ಭಾಗದಲ್ಲಿ ಓಂ ಎಂಬ ಪದ ಬಳಸುವ ಮೂಲಕ ಇಷ್ಟ ದೇವತೆಯನ್ನು ನೆನೆಯುವ ಮೂಲಕ ಶ್ರೀ.... ಶುಭ ಮಸ್ತು ಎಂಬ ಉಕ್ತಿಗಳಿಂದ ಪ್ರಾರಂಭಿಸುತ್ತಿದ್ದರು. ಅಂತ್ಯದಲ್ಲಿ ಮಂಗಳ ಮಹಾ ಶ್ರೀ ಶ್ರೀ ಶ್ರೀ... ಎಂದು ಗ್ರಂಥಕರ್ತರು ಬರೆಯುತ್ತಿದ್ದರು. ಬರವಣಿಗೆಯನ್ನು ಬರೆದ ನಂತರ ಮಠಗಳಿಗೆ ತಾಳೆಗರಿಗಳನ್ನು ಕೊಂಡೊಯ್ಯುತ್ತಿರುವಾಗ ಭಕ್ತಿ ಪೂರ್ವಕವಾಗಿ ಮೆರವಣಿಗೆಯ ಮೂಲಕ ಕುಣಿದು ಕುಪ್ಪಳಿಸಿ, ಕಳಸದೊಂದಿಗೆ ಸ್ತ್ರೀಯರು, ಛತ್ರ ಚಾಮರಗಳೊಂದಿಗೆ ವೈಭವಯುತವಾಗಿ ವಿಜೃಂಭಣೆಯಿಂದ ಕೊಂಡೊಯ್ಯುವುದರೊಂದಿಗೆ ಸಕಲ ಪೂಜೆ ಪುನಸ್ಕಾರಗಳನ್ನು ಮಾಡಿ ಗ್ರಂಥಗಳನ್ನು ನೆಲೆಗೊಳಿಸುತ್ತಿದ್ದರು. ಇಂದಿಗೂ ಕೆಲವೊಂದು ಮಠಗಳಲ್ಲಿ ಪುರಾಣ ಪ್ರವಚನ, ಸತ್ಯನಾರಾಯಣ ಮತ್ತು ದೇವಿಪುರಾಣಗಳು ಕಥೆಗಳನ್ನು ಹೇಳುವ ಸಂದರ್ಭದಲ್ಲಿ ಪೂಜಿಸುವುದನ್ನು ನೋಡಬಹುದು.

ಈ ಕನ್ನಡ ಹಸ್ತಪ್ರತಿಗಳನ್ನು ಗಮನಿಸಿದಾಗ ಸಾಮಾಜಿಕ, ಧಾರ್ಮಿಕತೆಗಳನ್ನು ಆಧರಿಸಿ ಬರೆದ ಬರವಣಿಗೆಯಾಗಿ ಕಾಣುತ್ತದೆ. ವ್ಯಕ್ತಿಯ ಸಾಧನೆ, ಸಿದ್ಧಿಗಳೇನಿದ್ದರೂ ಸಮಾಜದ ವಿಚಾರಗಳೊಂದಿಗೆ ಸಂಪರ್ಕಿಸಲು ಸಾಧ್ಯ. ಮಾನವೀಯತೆಯನ್ನಾಧರಿಸಿದ ವಿಚಾರಗಳು, ಸಾಂಸ್ಕೃತಿಕ ವಿದ್ವತ್ತನ್ನು ಎತ್ತಿ ಹಿಡಿಯುವುದಲ್ಲದೆ ಪಾರಲೌಕಿಕದ ಭಾವನೆಗಳು, ಇವೆಲ್ಲವುಗಳು ಮಾನವನ ಉನ್ನತಿಗಾಗಿ ಏನೆಲ್ಲ

ವಿಚಾರಗಳು ಇರುತ್ತವೆ ಎಂಬುದೇ ತಾಳೆಗರಿಗಳ ವಿಶೇಷವಾಗಿರುತ್ತದೆ. ಮಳೆಗಾಗಿ, ಬೆಳೆಗಾಗಿ, ಆರೋಗ್ಯ ಸಂವರ್ಧನೆಗಾಗಿ, ಔಷದೋಪಚಾರಕ್ಕಾಗಿ, ನೆಲ, ಜಲ, ಭವಿಷ್ಯಕ್ಕಾಗಿ, ಪ್ರಾಣಿ ಪಕ್ಷಿಗಳ ನೆಲೆಯ ಬೆಲೆಯ ತಿಳುವಳಿಕೆಗಾಗಿ, ರಸಜ್ಞಾನಕ್ಕಾಗಿ, ಹಾವು, ಚೇಳು, ಕಡಿತದ ನಿವಾರಣೆಗಾಗಿ ಮತ್ತು ಅಡಿಗೆ ವಿಚಾರಕ್ಕಾಗಿ ಇತ್ಯಾದಿ... ವಿಷಯಗಳನ್ನು ಮಾನವನ ಲೌಕಿಕ ಅಗತ್ಯಗಳ ಪೂರೈಕೆಗಾಗಿ ಹುಟ್ಟಿದ ಕೆಲವು ಲೋಕಾಯುತ ಕೃತಿಗಳಾಗಿ ಹೆಗ್ಗಳಿಕೆಯನ್ನು ಸಾಧಿಸುತ್ತಲಿವೆ. ಹೀಗೆ ಹಸ್ತಪ್ರತಿಗಳಲ್ಲಿ ಏನಿದೆ? ಎನ್ನುವುದಕ್ಕಿಂತ ಏನಿಲ್ಲ ಎಂಬುದನ್ನು ಪರಿಪೂರ್ಣವಾಗಿ ತಿಳಿಸಿಕೊಡುತ್ತವೆ.

ಈ ಹಸ್ತಪ್ರತಿಗಳು ಇಂದಿಗೂ ದೈವೀಸ್ವರೂಪವನ್ನು ಪಡೆದಿವೆ ಎಂಬುದನ್ನು ತಿಳಿಯಬೇಕಾದರೆ, ಈ ಎಲ್ಲ ವಿಷಯಗಳು ಅಡಗಿರುವುದರಿಂದಲೇ ಇಂದಿಗೂ ಹಾಗೆಯೇ ಕೆಲವೊಂದು ಮನೆ, ಮಠಗಳಲ್ಲಿ ಇಟ್ಟು ಪೂಜಿಸುತ್ತಾರೆ. ಹಸ್ತಪ್ರತಿಗಳಿಂದ ಉಪಯೋಗ ಪಡೆದುಕೊಂಡವರೂ ಇದ್ದಾರೆ. ಇನ್ನೂ ಕೆಲವೊಬ್ಬರು ಇವುಗಳಿಂದ ತಾವಾದರೂ ಉಪಯುಕ್ತ ಪಡೆದುಕೊಳ್ಳಲಿ ಎಂದು ಧಾರಳವಾಗಿ ಕೊಟ್ಟು ಸಹಕರಿಸುತ್ತಿರುವವರೂ ಇದ್ದಾರೆ. ಇನ್ನೂ ಕೆಲವರು ಇವುಗಳಲ್ಲಿ ವಿಷಯ ಏನಿದೆಯೋ ಎಂದುಕೊಂಡು ಗೌಪ್ಯವಾಗಿ, ಮೂಢನಂಬಿಕೆಯಿಂದಾಗಿ, ಭ್ರಮೆ, ಕಲ್ಪನೆಗಳಿಂದ ಬೇರೊಬ್ಬರಿಗೆ ಕೊಡದೆ ಹಾಗೆ ಇಟ್ಟುಕೊಂಡು ಪೂಜಿಸುತ್ತಿರುವವರೂ ಇದ್ದಾರೆ. 'ಸರ್ವಜನ ಸುಖಿನೋಭವಂತಿ' ಎಂಬ ಉಕ್ತಿಯಂತೆ ಜನರೆಲ್ಲರಿಗೂ ಸುಖದ ಹಾರೈಕೆಗಾಗಿ ಕಾರ್ಯನಿರ್ವಹಿಸುತ್ತವೆ. ಜನರಲ್ಲಿ ಬೇರೂರಿದ ಕಲ್ಪನೆಗಳನ್ನು ಕಿತ್ತೊಗೆದು ಹೊಸ ನಾವಿನ್ಯತೆಯತ್ತ ಸಾಗುವಂತೆ ಸಹಕರಿಸುತ್ತವೆ. ಸರ್ವರ ಏಳಿಗೆ ಹಸ್ತಪ್ರತಿಗಳ ಏಳಿಗೆಯಾಗಿದೆ ಎಂಬುದು ಕಲ್ಪಿಸಿಕೊಂಡಿರುವುದನ್ನು ನೋಡಬಹುದು.

**ಕೊನೆ ಟಿಪ್ಪಣಿಗಳು**

೧. ವಿ.ಎಸ್.ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೩೫, ೨೦೦೬
೨. ಎಂ.ಜಿ.ಮಂಜುನಾಥ, ಜಿ.ಕೆ.ದೇವರಾಜ, ಕನ್ನಡ ಲಿಪಿ ವಿಕಾಸ, ಪು.೨, ೨೦೦೪
೩. ದೇವರಕೊಂಡಾರೆಡ್ಡಿ, ಲಿಪಿ ಹುಟ್ಟು ಬೆಳವಣಿಗೆ, ಪು.೨೮೦, ೨೦೦೨
೪. ವಿ.ಎಸ್.ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೨೯, ೨೦೦೬
೫. ವಿ.ಎಸ್.ಬಡಿಗೇರ, ಕನ್ನಡ ಮೋಡಿಲಿಪಿ ಸಂರಚನೆ ಹಾಗೂ ಸಂವರ್ಧನೆ (ಅಪ್ರಕಟಿತ), ಪು.೧೭, ೨೦೧೦
೬. ಅದೇ, ಪು.೧೭, ೨೦೧೦
೭. ವಿ.ಎಸ್.ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೧೩೫, ೨೦೦೬
೮. ಅದೇ, ಪು.೧೩೫, ೨೦೦೬
೯. ಎಂ.ಎಂ.ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು.೧೯೯೩
೧೦. ಅದೇ, ಪು.೧೩೬, ೨೦೦೬
೧೧. ಅದೇ, ಪು.೧೩೮, ೨೦೦೬

೧೨. ವಿ.ಎಸ್.ಬಡಿಗೇರ, ಹಲಗೆ ಬಳಪ, ಪು.೩೪, ೨೦೦೫

೧೩. ಕೆ.ವಿ.ನಾರಾಯಣ(ಸಂ), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೧ ಭಾಷೆ, ಪು.೨೭೩, ೨೦೦೭

೧೪. ಅದೇ, ಪು.೮, ೨೦೦೩

೧೫. ಎಂ.ಚಿದಾನಂದಮೂರ್ತಿ, ಭಾಷಾವಿಜ್ಞಾನದ ಮೂಲತತ್ವಗಳು, ಪು.೧೫೦, ೧೯೮೯

೧೬. ಎಲ್.ಎಸ್.ಶೇಷಗಿರಿರಾವ್ (ಸಂ), ನಾಗರಿಕತೆಯ ಕಥೆ: ನಮ್ಮ ಪ್ರಾಚ್ಯ ಪರಂಪರೆಯ -೧, ಪು.೫೩೨, ೨೦೦೭

೧೭. ವಿ.ಎಸ್.ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೩೦, ೨೦೦೬

೧೮. ಅದೇ, ಪು.೩೧, ೨೦೦೬

೧೯. ಎಸ್.ಆರ್.ಚನ್ನವೀರಪ್ಪ (ಸಂ), ಹಸ್ತಪ್ರತಿಯ ವ್ಯಾಸಂಗ-೬, ಪು.೧೦೮, ೨೦೦೬

೨೦. ವಿ.ಎಸ್.ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೯೧, ೨೦೦೬

೨೧. ಅದೇ, ಪು.೧೪೭, ೨೦೦೬

೨೨. ಅದೇ, ಪು.೧೪೭-೧೮೪, ೨೦೦೮

೨೩. ವಿ.ಎಸ್.ಬಡಿಗೇರ, ಹಲಗೆ ಬಳಪ, ಪು.೩೧, ೨೦೦೫

೨೪. ವಿ.ಎಸ್.ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೧೩೦, ೨೦೦೬

೨೫. ಎಂ.ಚಿದಾನಂದಮೂರ್ತಿ, ಭಾಷಾ ವಿಜ್ಞಾನದ ಮೂಲತತ್ವಗಳು, ಪು.೧೫೩, ೨೦೦೮

೨೬. ಅದೇ, ಪು.೧೨೦, ೨೦೦೬

□□□

ನಾಲ್ಕು

# ಕನ್ನಡ ಸಂಸ್ಕೃತಿ ಹಾಗೂ ಬರವಣಿಗೆ

ಕನ್ನಡ ಸಂಸ್ಕೃತಿಯಲ್ಲಿ ಬರವಣಿಗೆ ಎಂಬುದು ಸಾಮುದಾಯಿಕವಾದ ಸೃಜನಶೀಲ ನೆಲೆಯಾಗಿ ಬೆಳೆದು ಬಂದಿದೆ. ಬರವಣಿಗೆ ಎಂಬುದು ಬರೀ ಅಕ್ಷರಗೊಳಿಸುವ ತಂತ್ರವಾಗಿರಲಿಲ್ಲ. ತಿಳಿಯುವ, ಬರೆಯುವ, ಓದುವ, ಕೇಳುವ, ಅರ್ಥೈಸುವ, ವ್ಯಾಖ್ಯಾನಿಸುವ, ಟೀಕಿಸುವ ಮತ್ತು ಪ್ರೇರೇಪಿಸುವ ಈ ಎಲ್ಲ ಸಂಗತಿಗಳೊಂದಿಗೆ ಮರು ರೂಪಕರಣಗೊಳ್ಳುವ ಒಂದು ಅರಿವಿನ ಕುರುಹಾಗಿ ಸಮಷ್ಠಿ ಪ್ರಜ್ಞೆಯ ಸಂವೇದನೆಯಾಗಿ ಮೂಡಿ ಬಂದಿದೆ. ಬರವಣಿಗೆ ಎನ್ನುವುದು ಯಾವುದೇ ಏಕಾಂತ ಸ್ಥಳದಲ್ಲಿ ಒಬ್ಬನೇ ಕುಳಿತು ಬರೆದು ಮುಗಿಸುವ ವ್ಯಕ್ತಿಗತ ಕ್ರಿಯೆಯಾಗಿರಲಿಲ್ಲ. ಕವಿರಾಜಮಾರ್ಗಕಾರ ಹೇಳುವಂತೆ ಕನ್ನಡಿಗರು 'ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣಿತ ಮತಿಗಳ್' ಆಗಿದ್ದರು. ಪಂಪ, ನಾಗವರ್ಮ, ಕುಮಾರವ್ಯಾಸ ಮತ್ತು ಮುದ್ದಣ್ಣ ಇವರೆಲ್ಲರೂ ಹೇಳುವ ಹಾಗೂ ಕೇಳುವ ಕಾವ್ಯ ಬರೆದರು. ನಾಗವರ್ಮನಂತೂ ಛಂದಸ್ಸಿನಂತಹ ಕಠಿಣ ವಿಷಯವನ್ನು ಹೆಂಡತಿಯ ಮೂಲಕ ಹೇಳುತ್ತಾನೆ. ಮುದ್ದಣ್ಣ ಮನೋರಮೆಯರ ಸರಸ-ಸಲ್ಲಾಪ ಪ್ರಸಿದ್ಧವಾದದ್ದು. ಕುಮಾರ ವ್ಯಾಸನ 'ಕೇಳುಜನಮೇಜಯ ಧರಿತ್ರಿ' ಎನ್ನುವ ವಾಕ್ಯ ಪರಿಚಿತವಾದದ್ದು. ಇವೆಲ್ಲವೂ ಬರಹದ ಸಾಮೂಹಿಕ ಸ್ವರೂಪವನ್ನು ಕಣ್ಣಿಗೆ ಕಾಣಿಸುತ್ತವೆ. ಇಂಥ ಬರಹದ ಸಾಮೂಹಿಕ ಹಾಗೂ ಸಾರ್ವತ್ರಿಕ ರೂಪವನ್ನು ವೈಯಕ್ತಿಕ ಹಾಗೂ ಖಾಸಗೀಕರಣಗೊಳಿಸುವ ಸಂಕುಚಿತ ವ್ಯಾಖ್ಯಾನಗಳಿಗೆ ಒಳಪಡಿಸುವ ನೆಲೆಗಳು ತುಂಬಾ ಅಪಾಯಕಾರಿಯಾದಂಥವು.

ಹಸ್ತಪ್ರತಿಗಳಂತ ಅರಿವಿನ ಸಾಮಗ್ರಿಗಳು ಇಂಥ ವಿಶಾಲ ಅರಿವಿನ ಮೇಲೆ ಹೋಗುವಂಥವು. ಮಹಾಭಾರತ ಮತ್ತು ರಾಮಾಯಣದಂತ ಸಂಗತಿಗಳು ಇಂದಿನವರೆಗೂ ಹೊಸ ತಿದ್ದುಪಡಿ ಹಾಗೂ ವಿಸ್ತರಣೆಗಳೊಂದಿಗೆ ಬೆಳೆದು ಬಂದಿವೆ. ಇದಕ್ಕೆ ಕಾರಣ ಬರವಣಿಗೆಗಿರುವ ಸಾಮೂಹಿಕ ಶಕ್ತಿ ತತ್ವಸಿದ್ಧಾಂತವೊಂದು ತನ್ನ ಕಾಲದಲ್ಲಿ ಎಷ್ಟೇ ಪ್ರಭಾವಶಾಲಿಯಾಗಿದ್ದರೂ ವರ್ತಮಾನದ

ವಿಮರ್ಶೆ ಮತ್ತು ತಿದ್ದುಪಡಿಗೆ ಒಳಗಾಗದೆ ಕೇವಲ ಭಕ್ತಿಯಿಂದ ಸ್ವೀಕಾರಗೊಳ್ಳುವುದಿಲ್ಲ ಪ್ರತಿ ಕಾಲವೂ ಅದನ್ನು ತನ್ನ ಅಗತ್ಯಕ್ಕೆ ಮುರಿದು ಕಟ್ಟಿಸಿಕೊಳ್ಳುತ್ತವೆ. ಸಮುದಾಯಗಳ ಟೀಕೆ ಮತ್ತು ಸೇರ್ಪಡೆಯಿಲ್ಲದೆ ಅವರ ಪ್ರತಿಭೆಯ ಸ್ಪರ್ಷವಿಲ್ಲದೆ ಯಾವ ತತ್ವಸಿದ್ಧಾಂತವೂ ಸೃಜನಶೀಲವಾದ ಮರುಹುಟ್ಟು ಪಡೆಯುವುದಿಲ್ಲ.

ಕನ್ನಡ ಸಾಹಿತ್ಯದಲ್ಲಿ ಹಲವು ಕವಿಗಳು ಲೌಕಿಕ ಕೃತಿಗಳನ್ನು ಬರೆದರು. ಇಂತಹ ಕೃತಿಗಳು ಲೋಕರೂಢಿಗಳನ್ನು ಒಳಗೊಂಡಿರುತ್ತವೆ. ಪಂಪನ ವಿಕ್ರಮಾರ್ಜುನ ವಿಜಯ ಕುಮಾರ ವ್ಯಾಸಭಾರತ, ರಟ್ಟಮತ ಕೃಷಿ ಬದುಕಿನ ಅನುಭವನ್ನು ಹೇಳುತ್ತದೆ. ಕುಮಾರ ರಾಮಯ್ಯ ಚರಿತ್ರೆ ಸಾಮಾಜಿಕ ಸಾಂಪ್ರದಾಯಗಳನ್ನು ಹೇಳುತ್ತದೆ. ಈ ಎಲ್ಲ ಕೃತಿಗಳು ಜನರ ಹಿತಾಸಕ್ತಿಗಳು, ಮನೋಭಿಲಾಶೆಗಳು, ಕಾರ್ಯಸಿದ್ಧಿ, ಸ್ವ–ಪರ ಸುಖದ ಹಾರೈಕೆಗಾಗಿ ಹುಟ್ಟಿಕೊಂಡಿವೆ. ಕೃತಿಗಳನ್ನು ಬರೆಯುವಾಗ ಮೊದಲು ಮತ್ತು ಕೊನೆಯಲ್ಲಿ ಮಂಗಳಕರವಾದ ಮನೋಭಾವನೆಯೊಂದಿಗೆ ಮುಕ್ತಾಯಗೊಳಿಸುತ್ತಿದ್ದದು ಇಂಥ ಉದ್ದೇಶಗಳಲ್ಲೊಂದಾಗಿತ್ತು.

ಕನ್ನಡ ಹಸ್ತಪ್ರತಿಗಳಲ್ಲಿರುವ ಶಿವಕೋಟ್ಯಾಚಾರ್ಯರರು ಬರೆದ ವಡ್ಡಾರಾಧನೆಯ ಕಥೆಗಳು, ದುರ್ಗಸಿಂಹರವರ ಪಂಚತಂತ್ರ ಕಥೆಗಳಲ್ಲಿರುವ ಪಾತ್ರಗಳು ಧಾರ್ಮಿಕ ಸಾಮಾಜಿಕ, ಐತಿಹಾಸಿಕ ಮನೋಭಾವನೆಯನ್ನು ಸ್ಪಷ್ಟಪಡಿಸುತ್ತವೆ. ಬಸವಣ್ಣ, ಅಲ್ಲಮಪ್ರಭುಗಳ ವಚನಗಳು ಜನರ ಹಿತಾಸಕ್ತಿಗಳನ್ನೇ ಆಧರಿಸಿ ಹೇಳುತ್ತಾರೆ. ಪುರಂದರ ದಾಸರು ಕನಕದಾಸರು ಹಾಡುಗಳ ಮೂಲಕ ಧಾರ್ಮಿಕ ಅಂಶಗಳನ್ನು ಬಿತ್ತರಿಸುವಲ್ಲಿ ಪಾಲ್ಗೊಂಡಿದ್ದರು. ಪಂಪನ ಆದಿಪುರಾಣ, ಪೊನ್ನನ ಶಾಂತಿಪುರಾಣ ಮತ್ತು ರನ್ನನ ಅಜಿತ ಪುರಾಣಗಳಲ್ಲಿ ಧಾರ್ಮಿಕ ಆಶಯಗಳನ್ನು ಕಾಣಬಹುದು. ಇವರೆಲ್ಲರ ಮನೋಭಾವಗಳು ಧಾರ್ಮಿಕತೆ, ನೈತಿಕತೆ, ದೈವೀಮನೋಭಾವನೆಯನ್ನೂ ಯಶಸ್ವಿಗೊಳಿಸುವಲ್ಲಿ ಪ್ರಮುಖವಾಗಿವೆ.

ಈ ಕೃತಿಗಳಲ್ಲಿ ವಿಶೇಷವಾಗಿ ಕಂಡುಬರುವ ಸಂಗತಿ ಎಂದರೆ ಗದ್ಯಕ್ಕಿಂತ ಪದ್ಯ ಹೆಚ್ಚು ಕೇಳುಗರಿಗೆ ಹತ್ತಿರವಾಗುತ್ತದೆ. ಗದ್ಯದ ಲಯಕ್ಕಿಂತ ಪದ್ಯದಲಯ ಪ್ರಾಧಾನ್ಯತೆಗೆ ಬಹುಬೇಗ ಕೇಳುಗರನ್ನು ಹಿಡಿದಿಟ್ಟುಕೊಳ್ಳುತ್ತದೆ. ಜನರ ಆಸಕ್ತಿ ಇಂದಿಗೂ ಕೇಳುವುದರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇದರಲ್ಲಿ ಸಂಗೀತದ ಭಾವನೆಯು ಜನರನ್ನು ಆಕರ್ಷಿಸುತ್ತದೆ. ಮನಸ್ಸಿಗೆ ನೆಮ್ಮದಿಯೊಂದಿಗೆ ಉತ್ಸಾಹ ಭರತನನ್ನಾಗಿಸುತ್ತದೆ.

ಕನ್ನಡ ಸಂಸ್ಕೃತಿ ಓದುವ ಮತ್ತು ಕೇಳುವುದರತ್ತ ಬಹು ಆಸಕ್ತವಾಗಿದೆ. ಸಾಹಿತ್ಯ ಎಲ್ಲರ ಸೊತ್ತಾಗಿರಲಿಲ್ಲ. ಅಂದು ಕೆಲವೊಬ್ಬರು ಮಾತ್ರ ಪರಿಣಿತರಿದ್ದರು. ಸಮಾಜದ ಕೆಲವೇ ಮಂದಿ ಮಾತ್ರ ಕಲಿತಿದ್ದರೆ ಸಾಗುತ್ತಿತ್ತು ಉಳಿದವರಿಗೆಲ್ಲ ಅದನ್ನು ಕಲಿಯುವ ಅವಶ್ಯಕತೆ ಇರಲಿಲ್ಲ. ಯಾಕೆಂದರೆ ಆವತ್ತಿನ ಸಮಾಜದಲ್ಲಿ ಹೆಚ್ಚಿನ ಮಂದಿಗೆ ಇದಕ್ಕಾಗಿ ಅವರು ಕಲಿತವರ ಸಹಾಯ ಪಡಿಯುತ್ತಿದ್ದರು. ಆದರೆ ಇವತ್ತು ಜೀವನದ ಪ್ರತಿಯೊಂದು ಸನ್ನಿವೇಶವನ್ನು ಬರಹ ಆಕ್ರಮಿಸಿಕೊಂಡಿದೆ. ಒಂದು

ವೇಳೆ ಬರಹ ಕಲಿತಯದೇ ತಿಳಿದವರ ಸಹಾಯ ಬೇಡಿದರೆ ಅಂತಹ ಜನರಿಂದ ವಂಚನೆಗೊಳಗಾಗುವ ಸನ್ನಿವೇಷಗಳೇ ಜಾಸ್ತಿ. ಹೀಗಾಗಿ ಅಂದು ಬರಹ ಹೇಳುವ ಲಯ ಮಾದರಿಯನ್ನು ಒಳಗೊಂಡಿತ್ತು. ಹಸ್ತಪ್ರತಿಗಳು ಇಂಥ ತಿಳಿವಳಿಕೆಯ ಮೂರ್ತರೂಪಗಳಾಗಿವೆ.

ಕನ್ನಡ ಹಸ್ತಪ್ರತಿಗಳು ಎಲ್ಲ ಬಗೆಯ ಕಾಲ ದೇಶದ ಚೌಕಟ್ಟನ್ನು ಮೀರಿ ಮನುಷ್ಯನ ಒಳಿತಿನ ಬಗ್ಗೆ ಚಿಂತಿಸುತ್ತವೆ. ಪ್ರತಿಯೊಂದು ಕೃತಿಯಲ್ಲಿ ಕವಿ ಲಿಪಿಕಾರರೂ ಕೂಡ ಮಾನವನ ಬಗ್ಗೆ ಎತ್ತುವ ಪ್ರಶ್ನೆಗಳು ಅವರ ಧಾರ್ಮಿಕ ನಿಲುವುಗಳನ್ನೇ ಆಧರಿಸಿಕೊಂಡು ಬರುವ ಪರಿಹಾರಗಳು ಕಾವ್ಯಾನುಭವ ಮತ್ತು ಧಾರ್ಮಿಕ ನಂಬಿಕೆಗಳು ಮಧ್ಯ ಗುಣಾತ್ಮಕವಾದ ಸಂವಾದವನ್ನು ಹುಟ್ಟು ಹಾಕುತ್ತವೆ. ಈ ಅಂಶಗಳಲ್ಲಿ ಮುಖ್ಯವಾಗಿ ಕಾಣುವುದು ಮಾನವನಿಗೆ ಭವ ಬಂಧನಗಳಿಂದ ಮುಕ್ತಿ ಪಡೆಯುವ ದಾರಿ. ಪಾಪ–ಪುಣ್ಯ, ಧರ್ಮ–ಕರ್ಮ, ದೇಹ–ಆತ್ಮ, ವ್ಯಕ್ತಿ ಸಮಾಜ, ಹಿಂಸೆ–ಅಹಿಂಸೆಗಳಂಥವುಗಳ ಸಂಗತಿಗಳ ಸುತ್ತ ಇಂಥ ನಂಬಿಕೆ ಜಗತ್ತು ಹರಡಿಕೊಂಡಿವೆ. ಅನಿಷ್ಟ ನಿವಾರಣೆ ಪುಣ್ಯಸಂಪಾದನೆ ಗುರಿಯಾಗಿರಿಸಿ ಕೊಂಡು ಸಾಹಿತ್ಯ ಹುಟುತ್ತಿರಲಿಲಲ್ಲಿದದರೊಂದಿಗೆ ಶಾಶ್ವತವಾದ ಸ್ವರ್ಗಸುಖವನ್ನು ಪಡೆಯಲೆಂದೇ ಪ್ರೇರೇಪಿಸುತ್ತವೆ. ಹುಟ್ಟಿನಿಂದ ಕೊನೆಯವರೆಗೂ ಯಾವುದೇ ಆಮೀಷಗಳಿಗೆ ಸಿಲುಕದಂತೆ ಜಾಗ್ರತೆಯನ್ನು ಕಂಡುಕೊಳ್ಳುವಂತೆ ನವನವೀನನನ್ನಾಗಿಸುವುದು ನಮ್ಮ ಸಂಸ್ಕೃತಿಯ ಲಕ್ಷಣಗಳಲ್ಲಿಯೂ ಒಂದಾಗಿದೆ.

ಕನ್ನಡದಲ್ಲಿ ಅಕ್ಷರಗಳಲ್ಲಿ ವಿವಿಧ ಬಗೆಯ ವಿನ್ಯಾಸಗಳು ಕಂಡುಬರುತ್ತವೆ. ವಿವಿಧ ಅಭಿರುಚಿಯುಳ್ಳ ಲಿಪಿಕಾರರು ಲಿಪಿಗೈಯುತ್ತಿರುವಾಗ ಸುಂದರ ಲೇಖನ, ಸಣ್ಣ ಲಪಿಲೇಖನಗಂಥ ಆಕಾರ ಪಡೆಯುತ್ತವೆ. ಅಕ್ಷರಗಳ ವೈಶಿಷ್ಟ್ಯಗಳು, ಮೈಕಟ್ಟುಗಳು, ಒತ್ತಕ್ಷರಗಳು ಒಂದೊಂದು ಅಕ್ಷರಕ್ಕೆ ತಕ್ಕಂತೆ ವರ್ಣಮಯವಾಗಿ ಕಂಡುಬರುತ್ತವೆ. ಲಿಪಿಕಾರರು ಧಾರ್ಮಿಕವಾಗಿ ತಮ್ಮನ್ನು ತಾವೂ ತೊಡಗಿಸಿಕೊಂಡು ಶ್ರದ್ಧೆಯಿಂದ ಬರೆದಿರುವುದನ್ನು ಅಕ್ಷರಗಳೇ ತಿಳಿಸುತ್ತವೆ. ಲಿಪಿಗೈದ ಸ್ಥಳ, ನಾಮಗಳ ಸಂಪ್ರದಾಯದ ಹಿಂದೆ ಹಿಂದೆ ಅವರ ಸಂಸ್ಕೃತಿಯೇ ಅಡಗಿರುತ್ತದೆ. ಕೃತಿಗಳು ಯಾವಾಗಲೂ ಸರ್ವರ ಹಿತರಕ್ಷಣೆಯ ಆಧಾರದಗಳಿಗೆ ಹೆಚ್ಚಾಗಿ ಒಲವನ್ನು ನೀಡುತ್ತವೆ. ಈ ಎಲ್ಲ ಸಂಗತಿಗಳು ಅಕ್ಷರಗಳಿಗೆ ದೇವರಂತಹ ದೈವೀಯ ಸ್ವರೂಪವನ್ನು ಒದಗಿಸಿದ್ದವು. ಧಾರ್ಮಿಕತೆಯ ಕಡೆ ಹೆಚ್ಚು ಆಸಕ್ತಿ ವಹಿಸಿದ್ದವು.

ಕನ್ನಡ ಕವಿ, ಲಿಪಿಕಾರರು ಓದುಗರು ಕನ್ನಡ ಬರಹ ಸಂಸ್ಕೃತಿಯನ್ನು ರೂಪಿಸುವಲ್ಲಿ ಮುಖ್ಯಪಾತ್ರ ವಹಿಸಿದ್ದರೆ. ಕವಿ ಲೋಕದ ಅನುಭವಗಳನ್ನು ತನ್ನ ಸೃಜನಶೀಲ ಮನಸ್ಸಿನಿಂದ ಅರಗಿಸಿಕೊಂಡು ಹೊಸನ್ನು ನಿರ್ಮಿಸುವುದರಲ್ಲಿ ಆಸಕ್ತನಾಗಿರುತ್ತಾನೆ. ಪ್ರತಿಕಾರರು ಕೂಡ ತನ್ನ ಸೃಜನ ಶೀಲತೆಯೊಂದಿಗೆ ಲಿಪಿಗೆರೆಯುತ್ತಾನೆ. ಇಂತಹ ಹಸ್ತಪ್ರತಿಳನ್ನು ರಕ್ಷಿಸಿದರೆ ಒಂದು ಜೈವಿಕ ಸನ್ನಿವೇಶಗಳನ್ನು ನೋಡಬಹುದು. ಅಪಾರ ಸಸ್ಯ ಸಂಪನ್ಮೂಲಗಳ ಮಾಹಿತಿಯೊಂದಿಗೆ ಆಯುರ್ವೇದಿಕ್ ಔಷಧಿಗಳೆಲ್ಲವುಗಳನ್ನು ಹಸ್ತಪ್ರತಿಗಳಲ್ಲಿ ಹಿಡಿದಿಟ್ಟಿದ್ದಾರೆ. ಅಲ್ಲದೆ ಗುಪ್ತ ವಿದ್ಯೆಯಾದ ತಂತ್ರ ಮಂತ್ರಗಳನ್ನು ಗುಪ್ತವಾಗಿ ಬರೆದಿರುವುದನ್ನು ಕಾಣುತ್ತೇವೆ. ಇವೆಲ್ಲವುಗಳೂ ಮಾನವನಿಗೆ ಆಶ್ರಯ ನೆಲೆಗಳಾಗಿಯೇ ಇರುವುದು ಸಂಸ್ಕೃತಿ ಅಧ್ಯಯನದಿಂದ ಹಿನ್ನೆಲೆಯಿಂದ ಸ್ಪಷ್ಟವಾಗಿ ಕಾಣುತ್ತದೆ.

ಕನ್ನಡ ಸಂಸ್ಕೃತಿಯಲ್ಲಿ ಬರವಣಿಗೆಯ ಪ್ರಾಮುಖ್ಯತೆಯನ್ನು ಹೆಚ್ಚಿಸುವಲ್ಲಿ ಹಸ್ತಪ್ರತಿಗಳು ಪ್ರಮುಖ ಸಾಧನಗಳಾಗಿದ್ದು ಕಂಡುಬರುತ್ತದೆ. ಒಬ್ಬ ಲಿಪಿಕಾರ ಶ್ರದ್ಧೆ ವಹಿಸಿ ಬರೆದಿರುವ ಅಕ್ಷರಗಳು ಇಂದಿಗೂ ಅಮರ. ಅಕ್ಷರ ಬರೆಯುವುದೆ ಕೀಳುಮಟ್ಟದರ ಕೆಲಸವೆಂದು ಬಗೆಯಲಾಗಿತ್ತು. ಇಂಥವರು ಬರೆದ ಅಕ್ಷರಗಳೇ ಇಂದು ಕನ್ನಡ ಬರಹ ಸುಸಂಸ್ಕೃತಿ ನಮಗೆ ಸಿಗಲು ಕಾರಣವಾಗಿದೆ. ಅಂದು ಕೀಳೆಂದು ಬಗದ ಸಂಸ್ಕೃತಿಯನ್ನು ಇಂದಿಗೂ ಜೀವಂತವಾಗಿ ಉಳಿಸುವಲ್ಲಿ ಲಿಪಿಕಾರರ ಸಾಹಸ ಮೆಚ್ಚುವಂಥದ್ದು.

ಕುಮಾರವ್ಯಾಸ ಭಾರತದಂತಹ ಕಥೆಗಳು ಇಂದಿಗೂ ಸಂಸ್ಕೃತಿ ಮುಖಿಯಾದಂತ ಜೀವಂತ ಕಥನಗಳಾಗಿವೆ. ಭಕ್ತಿಪ್ರಧಾನವಾಗಿಯೂ, ದಾರ್ಶನಿಕವಾಗಿಯೂ, ಪಾಪ ಪುಣ್ಯ, ಸುಖ ದುಃಖ, ಆತ್ಮ ಪರಮಾತ್ಮದ ಚಿಂತನೆಯ ಭಾಗವಾಗಿ ಇಂದಿಗೂ ಹೆಗ್ಗಳಿಕೆಯನ್ನು ಸಾಧಿಸುತ್ತಲೆ ಇದೆ. ಕುಮಾರವ್ಯಾಸ ಭಾರತ ಬರುವ 'ವಿರಾಟಪರ್ವ' ಈ ಭಾಗವನ್ನು ಮಳೆಬಾರದಿದ್ದ ಸಂದರ್ಭದಲ್ಲೂ, ಬರ ಬಿದ್ದಾಗಲೂ ಪಠಣ ಮಾಡುವ ಪದ್ಧತಿ ಕಂಡು ಬರುತ್ತದೆ. ಹೀಗೆ ಓದುವುದರಿಂದ ಮಳೆ ಬರುತ್ತದೆ ಎಂಬ ನಂಬಿಕೆ ಒಡಮೂಡಿದೆ. ಇಂದಿಗೂ ಕೆಲವೊಂದು ಹಳ್ಳಿಗಳಲ್ಲಿ ನಗರಗಳಲ್ಲಿ ಈ ರೀತಿ ಪಠಿಸುತ್ತಿರುವ ಸಂಪ್ರದಾಯಿ ಕಂಡುರುತ್ತದೆ. ಮಳೆ ಬಾರದ ಸಂದರ್ಭದಲ್ಲಿ ಸಪ್ತಭಜನೆ, ದೇವರಿಗೆ ಹೊಳೆ ನೀರಿನಿಂದ ಅಭಿಷೇಕ ಮಾಡುವುದು, ದೇವರ ಹೆಸರಿನಲ್ಲಿ ನೂರಾಒಂದು ಕೊಡ ನೀರು ಹೊತ್ತು ಹಾಕುವುದು, ಪರವುಗಳಂತಹ ಕಾರ್ಯಕ್ರಮಗಳು ಜರುಗುತ್ತಲೇ ಇದೆ. ಹೀಗೆ ಸತ್ಯ ನಾರಾಯಣವ್ರತ, ಮಹಾಲಕ್ಷ್ಮಿ ವ್ರತ, ವಿಘ್ನೇಶ್ವರ ವ್ರತ ಮತ್ತು ಶ್ರಾವಣ ಮಾಸಗಳಲ್ಲಿ ವಿಶೇಷವಾಗಿ ಶ್ರೀದೇವಿಯ ವ್ರತ, ಮಹಾಭಾರತ ವ್ರತ, ಭಗವದ್ಗೀತೆಯ ವ್ರತ, ನಾಗದೇವತೆಯ ವ್ರತ ಹಾಗೂ ದೇವಾಲಯಗಳಲ್ಲಿ ಭಜನೆ, ಉತ್ಸವ, ಕಾರ್ಯಕ್ರಮಗಳನ್ನು ಒಂದು ತಿಂಗಳವರೆಗೆ ಭಕ್ತಿಯಿಂದ ಆಚರಿಸುತ್ತಾರೆ ಪಠಣ ಪೂಜೆ ಹಾಗೂ ಬರಹ ಇವೆಲ್ಲ ಆಚರಣೆಗಳು ಸಂಸ್ಕೃತಿಯ ಪ್ರತೀಕವಾಗಿಯೇ ಕಾಣುತ್ತಿರುವುದು ವಿಶೇಷ.

ಕುರುಬರ 'ರಟ್ಟಮತ' ಕೃತಿ ನಿಸರ್ಗ ಸಂಪನ್ಮೂಲಗಳಾದ ನೆಲ, ಜಲ, ಮಳೆ ಬೆಳೆ, ಸೂರ್ಯ ಚಂದ್ರ, ನಕ್ಷತ್ರ, ರಾಶಿಫಲ, ಶಕುನ, ಅಪಶಕುನ, ಜ್ಯೋತಿಷ್ಯ, ಫಲಪುಷ್ಪ ಮತ್ತು ಗ್ರಾಹಣಗಳಂತಹ ಪರಿಕಲ್ಪನೆಗಳನ್ನು ಕೂಡ ಸ್ಪಷ್ಟವಾಗಿ ಮನವರಿಕೆ ಮಾಡಿಡುತ್ತಿರುವುದು ಕಂಡುಬರುತ್ತೆದೆ. ಇಂದಿನ ಸಂಶೋಧನೆಯ ಕ್ಷೇತ್ರದಲ್ಲಿ ಹೊಸ ನಾವಿನ್ಯತೆಯ ಕಲ್ಪನೆಯನ್ನು ಅಂದೇ ಬರೆದದ್ದು ಕಾಣುವುದು ಸಹಜ ಇದರ ಆಧಾರವಾಗಿ ಹೊಸ ಅಂಶಗಳೊಂದಿಗೆ ಸ್ಪಷ್ಟ ಮನವರಿಕೆಯೊಂದಿಗೆ ತಿಳಿಸುತ್ತಿರುವ ವಿಜ್ಞಾನಿಗಳ ಸಮೂಹವೇ ತಾಂಡವಾಡುತ್ತಿದೆ. ವಿಜ್ಞಾನಿಗಳಿಗೂ ಆಧಾರವೇ ಬೆನ್ನೇಲುಬಾಗಿರುವುದನ್ನು ಕಂಡುಕೊಂಡಿದ್ದಾರೆ. ಕೃಷಿ ಪ್ರಾಧ್ಯಾನ್ಯತೆಯನ್ನು ಪ್ರತಿಬಿಂಬಿಸುವ ಈ ಕೃತಿ ಇದೇ ಕ್ಷೇತ್ರದಲ್ಲಿ ಮೊಟ್ಟಮೊದಲು ವೈಜ್ಞಾನಿಕ ಕೃತಿಯಾಗಿದೆ. ಯಾವ ವೇಳೆಗೆ ಯಾವ ಬೀಜ ಬಿತ್ತಬೇಕು, ಎಷ್ಟು ಪ್ರಮಾಣದಲ್ಲಿ ಬೀಜ ಬಿತ್ತಬೇಕು, ಕೃಷಿಗೆ ಬೇಕಾಗಿರುವ ಸಲಕರಣೆಗಳು, ಎಂತಹ ಎತ್ತುಗಳಿರಬೇಕು, ಉಳುಮೆ ಮಾಡುವವರ ಲಕ್ಷಣಗಳು ಹೇಗಿರಬೇಕು ಮತ್ತು ಅವರ ಉಡುಗೆ-ತೊಡುಗೆ ಬೇಸಾಯದ ಪದ್ಧತಿಗಳೆಲ್ಲವನ್ನು ಸುದೀರ್ಘವಾಗಿ ಸ್ಪಷ್ಟಪಡಿಸುವಲ್ಲಿ ಈ ಕೃತಿ ಮಹತ್ವದ್ದಾಗಿದೆ.

ಬರವಣಿಗೆಯಿಂದ ಮಾನವ ಆರೋಗ್ಯ ಸಂವರ್ಧನೆಯಂಥ ಗುಣಗಳನ್ನು ಕಂಡುಕೊಂಡಿದ್ದಾನೆ. ಬಾಲಗ್ರಹ ಪೀಡೆ, ಸ್ತ್ರೀವಶೀಕರಣ, ಕಾಯಿಲೆಗಳಿಗೆ ಆಯುರ್ವೇದಿಕ ಗಿಡಮೂಲಿಕೆಗಳು ವಿವಿಧ ರೋಗ ರುಜಿನಗಳಿಗೆ ಔಷಧೋಪಚಾರಿಗಳಾಗಿದ್ದವು. ಅನಕ್ಷರಸ್ತರಿದ್ದರೂ ಬರವಣಿಗೆ ಬರದಿದ್ದರೂ ತಾಳೆಗರಿಗಳನ್ನು ಮುಂದಿಟ್ಟುಕೊಂಡು ಮಂತ್ರ ಬರೆಯುತ್ತಿರುವಂತೆ ಅಭಿನಯಿಸುತ್ತಿದ್ದರು. ಇದು ಬರವಣಿಗೆ ಮಹತ್ವವನ್ನು ಹೇಳುತ್ತದೆ. 'ಒರಿಸ್ಸಾದ ಕ್ರ್ಯಾಪ್ಟ್ ವಿಲೇಜಿನಲ್ಲಿ ಇಂದಿಗೂ ರೋಗ ರುಜಿನಗಳಿಗೆ ತಾಳೆಗರಿಯಲ್ಲಿ ಚೀಟಿ ಬರೆದು ಕಟ್ಟುವುದು',[೧] ಹೀಗೆ ಪೀಡೆ ಪರಿಹಾರಗಳಿಗೆ ತಾಳೆಗರಿಯ ಉಪಯೋಗ ದೈವೀ ಸ್ವರೂಪ ಪಡೆದುಕೊಂಡಿದೆ. ಆದ್ದರಿಂದಲೇ ಇದೊಂದು ಭಾವನಾತ್ಮಕ ಪ್ರಪಂಚವಾಗಿ ಪ್ರಚಲಿತವಾಗಿದೆ.

ಕುಮಾರರಾಮನ ಚರಿತ್ರೆಯಂಥ ಹಸ್ತಪ್ರತಿಗಳು ಕಟಿಕೊಡುವ ಸಾಂಸ್ಕೃತಿಕ ಹಿನ್ನೆಲೆ, ಸಾಮಾಜಿಕ ಸಂಕಥನ, ಗಂಡು ಹೆಣ್ಣಿನ ಬಾಂದವ್ಯಗಳು ಮಾರ್ಗದರ್ಶಇಯಾದಂಥವು 'ಕುಮಾರರಾಮನ ಚರಿತ್ರೆ'ಯ ಪಂಚಮಿ ಸರಣಿಯಲ್ಲಿ 'ಅಳಿಯಗೆ ಕೊಟ್ಟನು ಮಿಗೆ ಐದು ತೇಜಿಯ ಬಳುವಲಿ ಕೊಟ್ಟಾಕಳ ಹಿಂಡ. ಸೆಳೆಮಂಚ ಕೆರೆವೆಮ್ಮೆ ಹಿಂಡನೆ ಹೊಡಿಸಿದ ಒಳಿತಾಗಿ ಕೊಟ್ಟ ಜಗದಪ್ಪ'.[೨] ಅರಸ ತನ್ನ ಮಗಳನ್ನು ಗಂಡನ ಮನೆಗೆ ಕಳಿಸುವಾಗ ಹೇಳುತ್ತಾನೆ. ಪ್ರೀತಿಯ ಅಳಿಯನಿಗೆ ಕೊಟ್ಟಿದ್ದು ಐದರಷ್ಟು ಚಿನ್ನದ ನಾಣ್ಯ. ಒಂದು ಆಕಳಗಳ ಸಮೂಹ ಈ ಆಕಳಿನ ಹಾಲಿನಂತೆ ನೀನು ಸದಾ ನಿಶ್ಚಿಂತರಾಗಿ, ಸೌಭಾವಗ್ಯತಿಯಾಗಿರು ಎಂದು ಆ ದೇವರ ಕರುಣೆ ಸದಾ ನಿನ್ನ ಮೇಲೆ ಪ್ರಜ್ವಲಿಸುತ್ತಿರಲಿ ಎಂದೆಲ್ಲ ಆ ದೇವರಲ್ಲಿ ಪ್ರಾರ್ಥಿಸುತ್ತಾನೆ. ಹೀಗೆ ಮದುವೆಯ ಸಂದರ್ಭದಲ್ಲಿ ಬೀಗರೊಂದಿಗೆ ಒಡನಾಟ, ಆತ್ಮೀಯ ಸಂಬಂಧಗಳೆಲ್ಲವೂ ಸಾಂಗವಾಗಿ ಜರುಗುತ್ತವೆ. ಅಂದಿನ ಮದುವೆಯ ಕಾರ್ಯಕ್ರಮಗಳು ವಿಶೇಷವಾಗಿ ಮಾಸಾಂತ್ಯದವರೆಗೂ ಅಮೋಘವಾಗಿ ನಡೆಯುತ್ತಿದ್ದವು. ಇನ್ನೊಂದೆಡೆಯಲ್ಲಿ ಮಾಂಸಭಕ್ಷ್ಯ ಭೋಜನಾದಿಗಳು ಊರಹೊರಗೆ ನಡೆಯುತ್ತಿದ್ದವು ಎಂಬುದನ್ನೆಲ್ಲ ಹಿರಿಯರ ಕಾಲದಿಂದಲೂ ನಡೆದುಕೊಂಡು ಬಂದಿರುವುದನ್ನು ಇಂತಹ ಕೃತಿಗಳಿಂದ ತಿಳಿದುಕೊಳ್ಳುತ್ತೇವೆ. ಇತ್ತೀಚಿನ ದಿನಗಳಲ್ಲಿ ಮದುವೆ ಎಂಬುದು ಮೂರು ನಿಮಿಷದಲ್ಲಿ ನಡೆದು ಹೋಗುವಂತಹ ಪರಿಸ್ಥಿತಿಗೆ ತಂದೊಡ್ಡಿಕೊಂಡಿದ್ದೇವೆ.

ಜೈನ ಬೌದ್ಧರೇ ಹಾಗೂ ಬೌದ್ಧರು ಬರವಣಿಗೆಗೆ ಕೊಟ್ಟ ಕೊಡುಗೆ ಅಪಾರವಾದುದು. ಶಿಕ್ಷಣದ ಬಗ್ಗೆ ಹೆಚ್ಚಿನ ಕಾಳಜಿಯನ್ನು ತೋರಿಸಿ ಶಿಕ್ಷಣ ಕೇಂದ್ರಗಳನ್ನು ಜೈನ ಹಾಗೂ ಬೌದ್ಧಭಿಕ್ಷುಗಳಿಗಾಗಿ ಆರಂಭಿಸಿದರು. ಇವರಿಂದಲೇ ಹಲವಾರು ಧರ್ಮದವರು ತಮ್ಮ ಮಕ್ಕಳಿಗಾಗಿ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿದರು. ಬೌದ್ಧ ಧರ್ಮದಲ್ಲಿ ಪಾಪ ಪುಣ್ಯದ ಹಿಂದೆ ಅಹಿಂಸಾ ತತ್ವಗಳು ಗಾಢವಾಗಿ ಬೆಳೆದದ್ದು ಕಾಣುತ್ತದೆ. ಹಿಂಸೆಯನ್ನು ಮಾಡಬಾರದು, ನಾವು ಮಾತನಾಡುವಾಗಲೂ ಅವೆಷ್ಟೋ ಜೀವಾಣುಗಳು ನಮ್ಮೊಳಗೆ ಸೇರುತ್ತವೆ. ಇದರಿಂದ ನಾವು ಹಿಂಸೆಗೆ ಒಳಗಾಗುತ್ತೇವೆ ಎಂದು ಬಾಯಿಗೆ ಬಟ್ಟೆಯನ್ನು ಕಟ್ಟಿಕೊಳ್ಳುತ್ತಿದ್ದರು. ಜೀವನ ಎಂಬುದು ಒಂದು ಕಷ್ಟದಕೋಟಲೆಯಾಗಿದೆ. ಇದರಿಂದ ಪಾಪ ಮುಕ್ತರಾಗಬೇಕು. ಭವ ಬಂಧನಗಳಿಂದ ದೂರವಿರಬೇಕು. ಎಂದೆಲ್ಲ ಹೇಳಿದರು

ವಚನಕಾರರು ತತ್ವಪದಕಾರರು ಭಾಷೆಯನ್ನು ತಮ್ಮ ಹಾಡಿನ ಮೂಲಕ ಸಾರ್ವಜನಿಕರ ಧಾರೆಯೆರೆದರು. ವಚನಗಳು ನೇರವಾಗಿ ತಮ್ಮ ಆತ್ಮೀಯತೆ ಸಹೋದರತೆಯನ್ನು ಕಂಡುಕೊಂಡು ಒಡನಾಡಿಗಳಾಗಿರುವಂತೆ ಕಂಡುಕೊಳ್ಳಲು ಈ ಸಂಸ್ಕೃತಿಯೇ ಕಾರಣವಾಗಿದೆ. ಈ ಕನ್ನಡ ಹಸ್ತಪ್ರತಿಗಳಲ್ಲಿ ಆರ್ಥಿಕ, ಸಾಮಾಜಿಕ, ಧಾರ್ಮಿಕವಾಗಿಯೂ ಬರವಣಿಗೆಯು ನೀಡಿದ ಸಾಹಿತ್ಯ ಅತ್ಯಂತ ಪ್ರಚುರವಾಗಿದೆ. ಲಿಪೀಕರಣದ ಶ್ರದ್ಧೆವಹಿಸಿ ಮಾಡಿದ ಕಾರ್ಯಬಹುಮುಖ್ಯವಾಗಿದೆ. ಕವಿಕೃತಿಯನ್ನು ಮೂಲಕ ಚಲನಶೀಲವಾಗಿ ಹಿಡಿದು ನಿಲ್ಲಿಸಿದ್ದಾರೆ. ಬರವಣಿಗೆಕಾರರ ಅವಿಭಕ್ತ ಕುಟುಂಬ ಲಿಪಿಗೈಯುತ್ತಿರುವಾಗ ತಮ್ಮ ಹಾಡು ನುಡಿಗಳೊಂದಿಗೆ ತಮ್ಮ ಕುಲಗೋತ್ರಗಳನ್ನು ಒಂದೆಡೆ ಲಿಪಿಗೈದಿರುವುದು ಅವರ ಅವಿಭಕ್ತ ಸಂಸ್ಕೃತಿಯನ್ನು ತಿಳಿಸುವಲ್ಲಿ ಅತಿಮುಖ್ಯವಾಗಿದೆ.

### ೪.೧ ಕನ್ನಡ ಸಂಸ್ಕೃತಿಯಲ್ಲಿ ಬರವಣಿಗೆ ಕುರಿತು ಚಿಂತನೆಗಳು :



ಕನ್ನಡ ಸಂಸ್ಕೃತಿ ಎಂಬುದು ಮಾನವನ ನಡೆನುಡಿಗಳ ಚಲನಶೀಲ ಗುಣವುಳ್ಳದ್ದಾಗಿದೆ. ಕನ್ನಡ ಹಸ್ತಪ್ರತಿಗಳು ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿವೆ. ಹಸ್ತಪ್ರತಿಯಲ್ಲಿನ ಬರವಣಿಗೆಯನ್ನು ದೈವೀರೂಪವೆಂದು ಪರಿಗಣಿಸುತ್ತ ಬಂದಿದ್ದೇವೆ. ಸಾಹಿತ್ಯವು ಧಾರ್ಮಿಕವಾದ. ಸಾಮಾಜಿಕವಾದ ಮತ್ತು ಚಾರಿತ್ರಿಕವಾದ ಹಿನ್ನೆಲೆಯಲ್ಲಿ ಬೆಳೆದು ಬಂದಿರುವುದುನ್ನು ಕನ್ನಡ ಸಾಹಿತ್ಯ ಚರಿತ್ರೆಯಿಂದ ಕಂಡು ಕೊಂಡಿದ್ದೇವೆ. ಸಾಹಿತ್ಯವನ್ನು ಬರವಣಿಗೆಯಿಂದ ಈ ಲೋಕಗಳಿಗೆಲ್ಲ ಬಿತ್ತರಿಸುತ್ತೇವೆ. ಆದ್ದರಿಂದಲೇ ಬರವಣಿಗೆ ಬರೆದಂತೆಲ್ಲ ಸ್ಪುಟಗೊಳ್ಳುತ್ತದೆ. ವಿಶಾಲ ಮನೋಭಾವನೆಯನ್ನು ಕಂಡುಕೊಳ್ಳುತ್ತದೆ. ಹಾಗಾಗಿ ಇವೆರಡನ್ನು ಒಂದು ನಾಣ್ಯದ ಎರಡು ಮುಖಗಳೆದು ಕರೆಯಬಹುದು.

ಬರವಣಿಗೆಯು ಇಂದು ದಿನ ನಿತ್ಯದ ವ್ಯವಹಾರಿಕ ಜೀವನದಲ್ಲೂ ಅತಿಮುಖ್ಯವಾದ ಪಾತ್ರವನ್ನು ಕಂಡುಕೊಂಡಿದೆ. ನಾವು ಸತ್ಯ ಶೀಲದ ಮಾತುಗಳನ್ನಾಡಲೂಬಹುದು. ಆದರೆ ಈ ಮಾತುಗಳನ್ನು ಮೂರ್ತರೂಪಗೊಳಿಸಲಾಗುವುದಿಲ್ಲ. ಕೈಯಿಂದ ಬರೆದ ಅಕ್ಷರಗಳ ಸಮೂಹಕ್ಕೆ ಎಂತವರ ತಲೆಭಾಗಲೇ ಬೇಕು. ಆದ್ದರಿಂದ ಬರವಣಿಗೆ ಸ್ಪುಟಗೊಂಡಂತೆಲ್ಲ ಸತ್ಯ, ನಿಷ್ಠೆ, ಘನತೆ, ಗಾಂಭೀರ್ಯ, ಪ್ರಾಮಾಣಿಕತೆಗಳೆಲ್ಲವೂಗಳು ಗಟ್ಟಿಗೊಳ್ಳುತ್ತವೆ. 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಲೋಕನುಡಿಯಂತೆ 'ಮಾತು ಸುಳ್ಳಾದರೂ ಬರವಣಿಗೆ ಸುಳ್ಳಾಗದು'. ಸತ್ಯ ಸುಳ್ಳಾಗಬಹುದು. ಸುಳ್ಳು ಸತ್ಯವಾಗಲಾರದು, ಕೈಯಿಂದ ಬರೆದ ಬರವಣಿಗೆಗಳು ಎಂದೆಂದಿಗೂ ಅವಿನಾಶಿ.

ಬರಹ ವೃತ್ತಿ ಎಂಬುದು ದೇಹ ಮೂಲವಾದ ಕ್ರಿಯೆ. ಹೀಗಾಗಿ ಕವಿಯನ್ನು ಶ್ರೇಷ್ಠವೆಂದೂ ಲಿಪಿಕಾರರನ್ನು ಕನಿಷ್ಠವೆಂದೂ ಪರಿಗಣಿಸಲಾಗಿದೆ. ಇಲ್ಲಿ ಬುದ್ಧಿ ಮತ್ತು ಭಾವವನ್ನು ವಿಭಿನ್ನವಾಗಿ ಕಂಡುಕೊಂಡಿರುವುದನ್ನು ನೋಡುತ್ತೇವೆ. ಮನಸ್ಸಿಗೆ ಸಂಬಂಧಿಸಿದ್ದು ಶ್ರೇಷ್ಠ, ದೇಹಕ್ಕೆ ಸಂಬಂಧಿಸಿದ್ದು ಕನಿಷ್ಠ ಎಂಬುದು. ಶ್ರೇಷ್ಠ ಸಂಸ್ಕೃತಿಯ ಮಾತು ತಾತ್ವಿಕ ಧೋರಣೆಗಳು ಭಯ ಭಕ್ತಿಗೆ ಮೂಲವಾದರೆ ಲಿಪಿಕಾರನ ಶಕ್ತಿಗೆ ಬರವಣಿಗೆಯೇ ಮೂಲ. ಲಿಪಿಕಾರನ ಈ ಆಧೀನತೆಯ ಬರವಣಿಗೆಯನ್ನು

ಬ್ರಹ್ಮ ಬರಹವೆಂದೂ ದೈವೀಕೃತಗೊಳಿಸಿ ಮೂರು ಲೋಕಗಳಿಗೂ ಮಿಗಿಲು ಎನ್ನಲಾಗಿದೆ. ಕವಿ ವೀರನಾರಾಯಣ ನಾನು ಲಿಪಿಕಾರ ಎಂದು ಕುಮಾರವ್ಯಾಸ ಹೇಳಿಕೊಳ್ಳುತ್ತಾನೆ. 'ಕುಮಾರವ್ಯಾಸನು ಹಾಡಿದ ನೆಂದೆತೆ ಕಲಿಯುಗ ದ್ವಾಪರವಾಗುವುದು ಭಾರತ ಕಣ್ಣಲ್ಲಿ ಕುಣಿಯುವುದು'[೩] ಎಂಬ ಕವಿವಾಣಿಯಂತೆ ಹಾಗೆಯೇ ತಮ್ಮ ಮಡಿಬಟ್ಟೆ ಒಣಗುವವರೆಗೂ ಕಾವ್ಯ ಬರೆಯುತ್ತಾರೆಂದರೆ ಅವರಲ್ಲಿಯ ಏಕಾಗ್ರತೆ, ಕಾವ್ಯಾಸಕ್ತಿ ಎಂಥವರೂ ತಲೆಬಾಗಲೇಬೇಕು.

'ಬರೆಯ ತೊಡಗಿದೆ ತಪ್ಪುಬಂದಿರೆ
ಬರೆದ ದೋಷವದಾರ್ಗೆ ಕಂಠಕೆ.
ಬರೆದ ಬೆರಳಿಗೊ ಕೇಳ್ವಕರ್ಣಕೊನೋಳ್ವನಯನಕ್ಕೋ॥
ದುರಳ ಮನಶಿಗೊ ಹಂಮ್ಮುಚಿತ್ತಕೊ
ಯಿರದೆ ಬಾವಿಸಿನೋಡೆ ಬುದ್ಧಿಗೊ
ಶರೀರ ದೊಳಗೊಂದಿರ್ದ ಜೀವಾತ್ಮಂಗೊ ಬಾವಿಸಲೂ॥'[೪]

ಲಿಪಿಗೈಯುತ್ತಿರುವಾಗ ಓದುಗರಲ್ಲಿ ವಿನಯವನ್ನು ಲಿಪಿಕಾರ ಪ್ರಕಟಿಸುತ್ತಾನೆ. ಬರಯುತ್ತಿರುವಾಗ ಅರಿವಿಲ್ಲದೆ ಕೆಲವೊಂದು ತಪ್ಪುಗಳು ಆದರೂ ಆಗಬಹುದು. ಒಬ್ಬರಿಗೊಬ್ಬರು ಹೇಳುತ್ತಿರುವಾಗ ಕ್ಷೀಣ ಧ್ವನಿಯಿಂದ ಬರೆಯುತ್ತಿರುವಾಗ ಲೆಕ್ಕಣಿಕೆ ಹಿಡಿಯುವ ಕೈ ಬೆರಳು ನೋವಿನಿಂದ, ನೇರವಾಗಿ ನೋಡುತ್ತಿರುವಾಗ ಕಣ್ಣು ನೋವಿನಿಂದ, ಮಂಜು ಆವರಿಸಿದಾಗ, ಬುದ್ಧಿ ಭ್ರಮಾತ್ಮಕಕ್ಕೆ ಸಿಲುಕಿದಾಗ, ಮನಸ್ಸಿಲ್ಲದೆ ಬೇಜವ್ದಾರಿಯಿಂದ ಬರೆಯುವಾಗ ಇವೆಲ್ಲವೂ ಮಾನವನ ಜಡ ಸ್ವಭಾವಗಳು ತಪ್ಪು ಒಪ್ಪುಬರುವುದು ಸಹಜ. ಜೀವಾತ್ಮನು ಮಾತ್ರ ಚೈತನ್ಯ ಸ್ವರೂಪಿ ಇದಕ್ಕೆ ಹುಟ್ಟು ಸಾವು ಖಚಿತವೆಂದೂ ಲಿಪಿಕಾರರು ಹೇಳುತ್ತಾರೆ. ಲಿಪಿಕಾರರು ಬರೆಯುವಾಗ ತಮ್ಮ ಇಂದ್ರಿಯಾನುಗ್ರಹಗಳು ಆರಾಧ್ಯ ಗುರುಗಳಿಗೆ ಒಪ್ಪಿಸಿ ಬರೆಯುತ್ತಾರೆ. ಸಮಯ ನಿಷ್ಠೆ ಮುತ್ಸದ್ಧಿತನವನ್ನು ಮೈಗೂಡಿಸಿ ಕೊಂಡಿದ್ದರೆಂಬುದು ಅವರು ಹೇಳಿರುವ ವಾಖ್ಯೆಗಳು ಇಂದಿಗೂ ಸ್ಪಷ್ಟವಾಗಿವೆ. ಬರವಣಿಗೆ ಎಂಬುದು ಇಂದಿಗೂ ಶಿಷ್ಟ ಅಕ್ಷರಸ್ಥ ಸಾಹಿತ್ಯವಾಗಿ ರೂಪುಗೊಳ್ಳುತ್ತಲೇ ಬಂದಿದೆ. ಇಂತಹ ಬರವಣಿಗೆ ಲಿಪಿಕಾರರ ಅಂತರ್ಯವನ್ನು ಕಂಡುಕೊಳ್ಳುವಲ್ಲಿ ಪ್ರಮುಖವಾಗಿದೆ.

ಪಂಪ ಭಾರತದಲ್ಲಿ ಸಮಸ್ತ ವಿಷಯಗಳು ಒಳಗೊಂಡಿವೆ. 'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ. ಮುಂ ಸಮಸ್ತಭಾರತ ಮನಪೂರ್ವ ಮಾಗೆ ಸಲೆ ಪೆವ್ವಿಕವೀಶ್ವರರಿಲ್ಲ. ಈ ಆತ್ಮವಿಶ್ವಾಸದ ಜೊತೆಗೆ ನಮ್ರತೆಯೂ ಬೆರೆತಿದೆ. ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನಿಸುವೆಂ ಕವಿ ವ್ಯಾಸನೆಂಬ ಗರ್ವಮೆನಗಿಲ್ಲ'.[೫] ಈ ಕಥೆಯಲ್ಲಿರುವ ಅಂಶಗಳೊಂದಿಗೆ ಕೆಲವೊಂದು ಅಂಶಗಳನ್ನು ಬದಲಾಯಿಸಿಕೊಂಡಿದ್ದೇನೆ. ೧೪ ಆಶ್ವಾಸನೆಗಳಲ್ಲಿಯೇ ಚಿತ್ರೀತಗೊಂಡಿದೆ. ಆಶ್ರಯದಾತರಾದ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಅಜುನ–ಸುಭದ್ರೆಗೆ ಪಟ್ಟಕಟ್ಟಿದ್ದಾನೆ. ವ್ಯಾಸರು ದ್ರೌಪತಿಗೆ. ಧರ್ಮರಾಜನಿಗೆ ಪಟ್ಟಕಟ್ಟಿದ್ದಾರೆ. ಈ ಕಥೆ ಸಣ್ಣದಾದರೂ ಅರ್ಥಗರ್ಭಿತದಲ್ಲಿ ಬಹುವಿಸ್ತಾರವಾಗಿದೆ. ಆ ಕಥೆಯಲ್ಲಿ ಇದೊಂದು ಸಣ್ಣಕಥೆಯೇ ಹೊರತೂ ನಾನು ಬರೆದಿದ್ದೇನೆ

ಎಂಬ ಅಹಂಕಾರ ನನಗಿಲ್ಲ. ಲಿಪಿಕಾರ ಉಲ್ಲೇಖಿಸಿರುವಂತೆ ಪಂಪ ಉಲ್ಲೇಖಿಸಿದ್ದಾನೆ ಎಂಬುದು ಕನ್ನಡಿಗರ ಭಾಷೆ ಕೃತಿಯ ಅಭಿಮಾನ ಧನಗಳಿಂದಲೂ ಪರಂಪರೆಯಿಂದಲೂ ನಡೆದುಕೊಂಡು ಬಂದಿದೆ ಎಂಬುದು ಈ ಮಹಾಭಾರತದಂತ ಕೃತಿಯೇ ಸಾಕ್ಷಿ.

ಪಂಚತಂತ್ರ ಕಥೆಯಲ್ಲಿನ ವಿಶೇಷತೆಯೊಂದು ಪ್ರತ್ಯೇಕ್ಷ ಮತ್ತು ಪರೋಕ್ಷವಾಗಿ ಚಿತ್ರಿತಗೊಂಡಿದೆ. ವಿಷ್ಣುಶರ್ಮ ಬ್ರಾಹ್ಮಣರಾಗಿದ್ದರೂ ರಾಜಕುಮಾರರಿಗೆ ಬರವಣಿಗೆ ಮೂಲಕ ತಿಳಿಸುವುದಿಲ್ಲ. ಮಾತೆ ಪ್ರಧಾನವಾಗಿರುತ್ತದೆ. ಅಂದು ಮಾತಿಗೆ ಬಹು ಪ್ರಾಮುಖ್ಯತೆ ಇತ್ತು. ಆದರೂ ನ್ಯಾಯಸ್ಥಾನಗಲ್ಲಿ ಬರಹವೇ ಅಧಿಕೃತವಾಗಿತ್ತು. ಬರವಣಿಗೆ ಮತ್ತು ಮಾತು ಎರಡೂ ಕೂಡ ಪ್ರಮುಖವಾಗಿವೆ. ದಕ್ಷಿಣ ದೇಶದ ಕಾಂಚಾವತಿಯೆಂಬ ಅಗ್ರಹಾರದ ಬ್ರಾಹ್ಮಣನೊಬ್ಬ ತನ್ನ ಅವಸಾನದ ಹೊತ್ತಲ್ಲಿ ತನ್ನ ಮಗನ ಭವಿಷ್ಯಕ್ಕಾಗಿ ಒಂದು ಚೀಟಿಯಲ್ಲಿ ಶ್ಲೋಕವನ್ನು ಬರೆದು ಪೂರ್ವದಲ್ಲಿ 'ನಭೋಕ್ತ ಎಂಬ ಚರಣವನ್ನು ಬರೆದಿರುತ್ತಾನೆ. ತನ್ನ ತಂದೆಯ ಸಾವಿನ ನಂತರ ೧೦೦೦ ವರಹಕ್ಕೆ ಮಾರಿಕೊಂಡು ಸುಖಜೀವನ ಸಾಗಿಸುತ್ತಾನೆ. ಬರವಣಿಗೆ ಎಂಬುದು ಅಂದಿನ ಕಾಲಕ್ಕೆ ಕೂಡ ವಾಣಿಜ್ಯೀಕರಣಗೊಂಡಿತ್ತು. ಅಂದಿನಿಂದ ಇಂದಿನವರೆಗೂ ಬರವಣಿಗೆಯ ಬೇಡಿಕೆ ಇನ್ನೂ ಹೆಚ್ಚುತ್ತಲೆ ಇದೆ. ಹಣಕ್ಕಿಂತಲೂ ಲಿಖಿತಾಧಾರಗಳ ಬರವಣಿಗೆಯ ಮೇಲೆ ಬೆಲೆ ಕಟ್ಟಲು ಅಸಾಧ್ಯವಾಗಿಯೇ ಉಳಿದಿದೆ. ಬರವಣಿಗೆಯ ಮೇಲೆ ಇರುವ ನಂಬಿಕೆ ಬೇರೆ ಎಲ್ಲಿಯೂ ಇರಲಾರದು. ವಿದ್ಯೆಯಿಲ್ಲದವರ ಬಾಳುಹದ್ದಿಗಿಂತ ಕಡೆ' ವಿದ್ಯೆ ಬದುಕನ್ನು ಅರಳಿಸುತ್ತದೆ, ಹೊಸಹಾದಿಯತ್ತ ನಡೆಸುತ್ತದೆ. ವ್ಯವಹಾರಿಕಜ್ಞಾನ, ಬುದ್ಧಿಯ ಚಿಂತನೆ ಮುತ್ಸದ್ಧಿತನವನ್ನು ಕಂಡುಕೊಂಡು ಉನ್ನತ ವ್ಯಕ್ತಿಯನ್ನಾಗಿಸುತ್ತದೆ. ಹಾಗೆಯೇ ಹಸ್ತಪ್ರತಿಗಳನ್ನು ಆಪತಕಾಲದಲ್ಲಿ ಒತ್ತೆಇಟ್ಟು ಜೀವನ ನಡೆಸುತ್ತಿದ್ದರೂ ಕುಮಾರ ವ್ಯಾಸನು ತಾನು ಕೈಯಾರೆ ಬರೆದ ಮಹಾಭಾರತ ಪ್ರತಿಯನ್ನು ನೆರೆಹಳ್ಳಿ ಶ್ರೀಮಂತರೊಬ್ಬರಲ್ಲಿ ಇಟ್ಟಿದು ಕಂಡುಬಂದಿದೆ[೫]. ಮಾನವನ ಆಪತ್ತುಗಳೊಂದಿಗೆ ಸಹಾಯ ನೀಡಿದ್ದು. ಸಾಯುವ ಹಂತದಲ್ಲಿದ್ದರೂ ಜೀವ ಉಳಿಸುವುದು. ಹೀಗೆ ಏನೆಲ್ಲ ಸಕಲ ಕಾರ್ಯಗಳಲ್ಲಿ ಸಹಾಯಹಸ್ತವನ್ನು ನೀಡಿ ನಮ್ಮೊಂದಿಗೆ ಜೀವಿಸಿರುವುದನ್ನು ಕಾಣುತ್ತೇವೆ.

ಈ ಹಸ್ತಪ್ರತಿಗಳನ್ನು ಜೀವರಕ್ಷಣೆ, ನಿಂದನೆ ಅಪಾದನೆಗಳಿಂದ ಕೆಲವೊಂದು ಸಂದರ್ಭದಲ್ಲಿ ಹಸ್ತಪ್ರತಿಗಳನ್ನು ಅಗ್ನಿಗೆ ಆಹುತಿಯಾಗಿರುವುದನ್ನು ನೋಡುತ್ತೇವೆ. ಚಾಮರಸನು 'ಭಾರತಕಾವ್ಯ' ಬರೆದು ರಾಜೋಜಿತರಿಂದ ಮೆಚ್ಚುಗೆ ಪಡೆದಿದ್ದನು. ಇದರಿಂದ ಅವಮಾನಿತನಾದ ಕುಮಾರವ್ಯಾಸ ಪತ್ನಿಯೊಂದಿಗೆ ಆಕೆಯ ಅಣ್ಣನಾದ ಚಾಮರಸನು ಬರೆದಿರುವ ಹಸ್ತಪ್ರತಿಯಿಂದ ಮೆಚ್ಚುಗೆ ಪಡೆದುಕೊಂಡಿರುವ ಪ್ರತಿಯನ್ನು ತರಿಸಿ ಆ ಪ್ರತಿಯನ್ನು ಸುಡಿಸಿ ಅದರ ತಿಲಕವನ್ನು ನನ್ನ ಹಣೆಗೆ ಹಚ್ಚು ಎಂದು ಪತ್ನಿಗೆ ಆಜ್ಞೆ ಮಾಡಿದನು. ಆಕೆಯು ನನ್ನ 'ಪತಿಯೇ ಪರಂಧಾಮ' ಎಂದು ಆಜ್ಞೆಯನ್ನು ಪಾಲಿಸುತ್ತಾಳೆ. ಇದರಿಂದ ಕುಮಾರವ್ಯಾಸ ತನ್ನ ಸೇಡನ್ನು ತೀರಿಸಿಕೊಳ್ಳುತ್ತಾನೆ.

ಕ್ರಿ.ಪೂ.೩ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ಜೈನಧರ್ಮದಲ್ಲಿ ಹಸ್ತಪ್ರತಿಗಳು ಪ್ರಮುಖ ಜೈನರೇ ಜೀವಂತ ಸಾಧನೆಯನ್ನು ಸಾಧಿಸಿವೆ. ಬರವಣಿಗೆಗೆ ಪ್ರೋತ್ಸಾಹ ನೀಡಿದವರಲ್ಲಿ

ಇವರೇ ಮೊಟ್ಟಮೊದಲಿಗರು. ಪ್ರತಿಗಳ ರಚನೆ, ಪೋಷಣೆ ಮತ್ತು ಅಭಿವೃದ್ಧಿ ಪಡಿಸುವುದು ಧರ್ಮದ ಉದ್ದೇಶ. '...ಚತುಃಸಂಘಮಂ ಪೂಜಿಸಿ ೮ ತಂಡ ಋಷಿಯರ್ಗೆ ಭಿಕ್ಷೆಯಂ ಮಾಡಿಸಿ ತಟ್ಟುಕುಂಬ ಗುಂಡಿಗೆ ಪುಸ್ತಕ ಶ್ರುತಪಾವಡೆಗಳಂ ಕೊಟ್ಟು ಚತುಃಸಂಘ ಪೂಜೆಯಂ'[೬] ಪೂಜೆ ಮಾಡುವ ಮೊದಲು ನಾಲ್ಕು ದಿಕ್ಕುಗಳಿಗೆ ಪೂಜಿಸಿ, ಋಷಿಮುನಿಯರನ್ನು ಆಹ್ವಾನಿಸಿ ಅವರಲ್ಲಿ ೮ ಸಮೂಹ ಮಾಡಿ ಅವರಿಗೆ ಪ್ರತ್ಯೇಕವಾಗಿ ಊಟ ಉಪಚಾರಗಳೊಂದಿಗೆ ಸಂತೈಸಿ ಬರೆಯಲು ತಾಳೆಗರಿಗಳು, ಲೆಕ್ಕಣಿಕೆಯ ಸಾಮಗ್ರಿಗಳು ಮತ್ತು ಮಸಿದೌತೆಗಳನ್ನು ಕೊಟ್ಟು ಪುಸ್ತಕಗಳನ್ನು ಬರೆಯುವಂತೆ ಲಿಪಿಕಾರರಿಗೆ ಪ್ರೋತ್ಸಾಹಿಸುತ್ತಿದ್ದರು. ಇಂತಹ ಶಾಸ್ತ್ರಧಾನಗಳಿಗೆ ವಿಶೇಷವಾಗಿ ಆದ್ಯತೆ ನೀಡಿತ್ತಿದ್ದು ಇವರೇ ಮೊದಲಿಗರು. ಅಂತೆಯೇ ಅತ್ತಿಮಬ್ಬೆಯು ಪೊನ್ನನ ಶಾಂತಿಪುರಾಣವನ್ನು ರನ್ನನಿಂದ ಒಂದು ಸಾವಿರ ಪ್ರತಿಗಳನ್ನು ಬರೆಸಿ ಧಾನಮಾಡುತ್ತಾಳೆ. ಜೈನಧರ್ಮದ ಜಿನಪತಾಕೆಯನ್ನೇ ಹಾರಿಸುತ್ತಾಳೆ.

ವೀರಶೈವರು ಜೈನರಂತೆಯೇ ಎಡಗೈಯಮತೆ ಹಸ್ತಪ್ರತಿಗಳನ್ನು ಪೋಷಿಶಿಕೊಂಡು ಬಂದಿದ್ದಾರೆ. ಹಸ್ತಪ್ರತಿಗಳ ರಕ್ಷಣೆ, ಪೋಷಣೆ ಮತ್ತು ಪ್ರಸರಣವನ್ನು ವ್ಯವಸ್ಥಿತವಾಗಿ ಮುಂದುವರೆಸಿ ಶರಣರ ಸಾಹಿತ್ಯವನ್ನು ಲೋಕಕ್ಕೆಲ್ಲ ತಿಳಿಯಪಡಿಸಿದರು. ಜೈನರು ಸಂಸ್ಕೃತಕ್ಕೆ ಒಲವು ನೀಡಿದ್ದರೆ, ಇವರು ನಡುಗನ್ನಡ ಸಾಹಿತ್ಯಕ್ಕೆ ಮಹತ್ವ ನೀಡಿದರು. ತಮ್ಮ ಸಾಹಿತ್ಯದಲ್ಲಿ ಜನಸಾಮಾನ್ಯರ ಶಿಕ್ಷಣವನ್ನು ಹೆಚ್ಚಾಗಿ ಪ್ರೋತ್ಸಾಹಿಸಿದರು. ಆದ್ದರಿಂದ ವೀರಶೈವರು ಜೈನರಗಿಂತ ಹೆಚ್ಚು ಶರಣ-ಶರಣೆಯರು ವಚನಗಳನ್ನು ಪ್ರಚಾರ ಪಡಿಸಿದರು. ಶರಣರ ಧರ್ಮಪ್ರಸಾರದೊಂದಿಗೆ ಬಸವಪುರಾಣ, ವೀರಶೈವ ಪುರಾಣ, ವಚನ ಬಂಡಾರಗಳಲ್ಲಿ ಸಂಗ್ರಹಿಸಿ ಚರ್ಚಿಸುತ್ತಿದ್ದರು. ಕೊಡೇಕಲ್ಲ ಬಸವಣ್ಣ ಮಠಗಳಲ್ಲಿ ಕಾಲಜ್ಞಾನದ ಪ್ರತಿಗಳನ್ನು ಬರೆಯುತ್ತಿದ್ದರು. ಪರಂಪರೆಯಿಂದಲೂ ಈ ಹಸ್ತಪ್ರತಿಗಳನ್ನು ಗದ್ದುಗೆ ಮೇಲಿಟ್ಟು ಇಂದು ಕೂಡ ಪೂಜಿಸುತ್ತಾರೆ. ಕೆಳದಿ ದೊರೆ ಲಕ್ಷದ ತೊಂಬತ್ತಾರು ಸಾವಿರ ಜಂಗಮ ಮೂರ್ತಿಗಳಿಗೆ ಶಾಸ್ತ್ರಧಾನ ಮಾಡಿದ್ದನ್ನು ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡಲಾಗಿದೆ.

ಇವರು ವಚನ ಸಾಹಿತ್ಯದಲ್ಲಿಯೂ ಸಂಸ್ಕೃತಿಯನ್ನು ಬಹುವಿಶಾಲ ಮನೋಭಾವನೆಯಿಂದ ನೋಡಿದ್ದಾರೆ. ವಚನ ಎಂದರೆ ಮಾತು ಮುಖಾಮುಖಿ ಮಾತನಾಡುವ ಬರೆಯುವ ಮೂಲಕ ಸಾಹಿತ್ಯ ಸವಿಸ್ತಾರವಾಗಿ ವಿಸ್ತರಿಸುತ್ತದೆ. ಅಲ್ಲಮಪ್ರಭು, ದೇವರದಾಸಿಮಯ್ಯ, ಸಕಲೇಶ ಮಾದರಸ ಬಸವಣ್ಣ, ಅಂಬಿಗರ ಚೌಡಯ್ಯ ಮತ್ತು ಹರಿಹರ ರಾಘವಾಂಕರು ಈ ಸಾಹಿತ್ಯದಲ್ಲಿ ಅದ್ವಿತೀಯ ಸಾಧನೆಗೈದಿದ್ದಾರೆ.

'ಅಕ್ಷರದಲಭ್ಯಾಸವ ಮಾಡಿ ಬರೆವ ತೊಡೆವ ಪರಿ ಇನ್ನೆಂತೂ
ಸ್ವರೂಪೆಂದಾವುದು ನಿರೂಪೆಂದಾವುದೆಂದರಿಯರಾಗಿ,
ಆದಿನಿರಾಳ, ಮಧ್ಯನಿರಾಳ, ಊರ್ಧ್ವನಿರಾಳ ಗುಹೇಶ್ವರಾ'[೭]

ಸಾಹಿತ್ಯದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸಿರುವರೆಂದರೆ ಅಲ್ಲಮಪ್ರಭು. ಅಕ್ಷರ ಬರೆಯುವುದು, ಓದುವುದು ಇದೊಂದು ದೈವೀಯಾನುಭಾವ. ಅಭ್ಯಾಸದಲ್ಲಿ ನಿರತರಾದಷ್ಟು ವಿಷಯವನ್ನು

ಇನ್ನಷ್ಟು ಸ್ಪಷ್ಟಪಡಿಸುವುದು. ಇದೊಂದು ನಿರಂತರ ಕ್ರಿಯೆ. ನೇರವಾಗಿ ಬರೆಯಲು ಸಾಧ್ಯವಿಲ್ಲ. ಬರೆದರೆ ಹಿಂದಿನ ಮತ್ತು ಇಂದಿನ ವಿಷಯ ಆಧರಿಸಿ ಧಾರ್ಮಿಕ ವಿಶಿಷ್ಠ ಅನುಭವಗಳ ಸನ್ನಿವೇಶದಲ್ಲಿ ಹುಟ್ಟುವ ಪರಿಕಲ್ಪನೆಗಳನ್ನು ಕವಿಯ ಅಜ್ಞಾದಾರಕರಾಗಿ ನಿಯಮ ರೂಢಿಗನುಸಾರವಾಗಿ ಬರೆಯುವರು. ನಮ್ಮ ಕರುಣಾಕರರಾದ ಆ ಗುರುದೇವ ಗುಹೇಶ್ವರಾ ಎಂದು ನೆನೆಸಿಕೊಳ್ಳುತ್ತಿದ್ದರು. ಇವರು ಶರಣರ ಅನುಭವ ಮಂಟಪದಲ್ಲಿ ಶೂನ್ಯಸಿಂಹಾಸನದ ಪೀಠಾಧ್ಯಕ್ಷರಾಗಿದ್ದು ವಚನ ಭಾಷೆಯ ಅನುಭಾವಿಯಾಗಿ, ಕವಿಯಾಗಿ ಸಿದ್ಧಸಾಧಕರಾಗಿ, ಅತ್ಮಜ್ಞಾನ ವೈರಾಗ್ಯಗಳನ್ನು ಕಂಡುಕೊಂಡಿದ್ದರು.

ವೀರಶೈವ ಸಾಹಿತ್ಯದಲ್ಲಿ ಬಸವಣ್ಣರು ಬಹು ಸುಜನಗುಣ ಸಂಪನ್ನರಾಗಿದ್ದರು. 'ಗೀತಮಂಪಾಡೆ ಮಹಾದೇವಿ ಸೆಟ್ಟಿಯರು ಕೇಳ್ದು ಕಂಪಿಸಿ ಕೌತುಕಂಗೊಂಡು ತಲೆಯಂತೂಗಿ ಗೀತಾರ್ಥಮಂ ಪರೀಕ್ಷಿಪಂ'.೮ ಈ ಸಾಹಿತ್ಯ ಲೋಕದಲ್ಲಿ ಭಗವದ್ಗೀತೆಯಂತೆ ತಮ್ಮ ಆಚಾರ ವಿಚಾರಗಳೊಂದಿಗೆ ತನ್ನ ವ್ಯಕ್ತಿತ್ವದ ಅರಿವು ತಂದುಕೊಳ್ಳುವುದೇ ತಿಳುವಳಿಕೆಯ ಮೂಲವಾಗಿದೆ. ಅದರಂತೆ ವಚನಗಳನ್ನು ತಿಳಿಸುತ್ತಾ ಪ್ರಚಾರ ಕೈಗೊಂಡರು. ಜನರಾಸಕ್ತಿಯನ್ನು ತಮ್ಮಲ್ಲಿರಿಸಿಕೊಳ್ಳುವಂತೆ ಸಾಧನೆಗಳನ್ನು ಬಿತ್ತರಿಸಿದರು. ಮಾಹಾದೇವಿಯವರು ಜಿಗುಪ್ಸೆಗೊಂಡು ವೈರಾಗ್ಯ ಪರವಶರಾಗಿ ಇದೊಂದು ಮಾಯಾಲೋಕ ಇದಕ್ಕೆ ನಾವೆಲ್ಲರೂ ಸೀಮಿತರಾಗಿದ್ದೇವೆ. ಸಮಾಜದಲ್ಲಿ ರೂಢವಾಗಿ ಬೇರೂರಿದ್ದ ಜಾತಿವೈಶಮ್ಯಗಳನ್ನು ಮತ ಧರ್ಮಗಳ ಮೇಲು-ಕೀಳುಗಳನ್ನು ಕಿತ್ತು ಹಾಕಿದರು.

ಶೈವರು ಕರ್ನಾಟಕದಲ್ಲಿ ಪ್ರಮುಖವಾಗಿ ಕಾಣುತ್ತಾರೆ. ಇವರಲ್ಲಿ ಕಾಳಾಮುಖರು ಪ್ರಸಿದ್ಧ ಗುರುಗಳು. ಬಳ್ಳಗಾವಿಯ ಕೋಡಿಮಠಗಳು ಧಾರ್ಮಿಕ ಕೇಂದ್ರಗಳಾಗಿದ್ದವು. ತಮ್ಮ ಗುರುಗಳನ್ನು 'ವಿದ್ಯಾಬ್ಧಿ, ಸರ್ವಜ್ಞ ಕಲ್ಪರ್ ಎಂದು ಕರೆಯುತ್ತಿದ್ದರು. ವಿದ್ಯೆಗೆ ವಿಶಿಷ್ಟತೆ ನೀಡಿದ್ದರು. ವೈದಿಕರು ಅಗ್ರಹಾರ, ಬ್ರಹ್ಮಪುರಿಗಳು ವಿದ್ಯಾಕೇಂದ್ರಗಳಾಗಿದ್ದವು. ಇವರು ವಿಶೇಷವಾಗಿ ಮೌಖಿಕ ಸಾಹಿತ್ಯಕ್ಕೆ ಆದ್ಯಂತೆ ನೀಡಿದ್ದರು. ವೇದ ಮಂತ್ರಗಳನ್ನು ಪಠಿಸುತ್ತಿರುವುದು ಬಹುಪ್ರಮುಖವಾಗಿದೆ.

'ಬರೆಹ ವಾಚನ ಗಣಿತ ಶಬ್ದಾ
ರ್ಥ ರಸಭಾವೋಕ್ತಿ ಪ್ರವೀಣತೆ
ಭರತ ಛಂದೋ ವ್ಯಾಕರಣ ಸಂಗೀತ ಸಾಹಿತ್ಯ'೯

ಇವರಲ್ಲಿ ಮೊದಲು ಸಂಗೀತಕ್ಕೆ ಪ್ರೋತ್ಸಾಹ ನೀಡಿದ್ದರು. ಸಂಗೀತ ಎಂದರೆ ಸ್ವರ್ಣಗಳಿದ್ದಂತೆ ರಾಗಬದ್ಧವಾಗಿ ಹಾಡುವುದು ಪ್ರಮುಖವಾಗಿದೆ. ಪ್ರತಿಯೊಂದು ವಿಷಯದಲ್ಲಿ ಗಣಿತವನ್ನು ಮುಖಾಮುಖಿಯಾಗಿ ಬಾಯಿಪಾಠ ಮೂಲಕ ಒಪ್ಪಿಸಬೇಕಾಗಿತ್ತು. ಮಂತ್ರಾಕ್ಷರಗಳು, ವೇದಗಳು, ಛಂದಸ್ಸು ಮತ್ತು ವ್ಯಾಕರಣಗಳಂಥವುಗಳೆಲ್ಲವೂ ಲಯ ಬದ್ಧವಾಗಿ ಹಾಡಿನ ರೂಪದಲ್ಲಿ ಒಪ್ಪಿಸಬೇಕಾಗಿತ್ತು. ಮತ್ತು ನೃತ್ಯಗಳಿಗೂ ಆದ್ಯತೆ ಕೊಟ್ಟಿದ್ದರು. ಹಾಡಿನ ರೂಪದಲ್ಲಿಯೇ ಪದ್ಮಣಾಂಕನ ಪದ್ಮರಾಜ ಪುರಾಣ, ವಿಮರ್ಶೆಯ ಪದ್ಯಗಳು ಹಸ್ತಪ್ರತಿಗಳಲ್ಲಿ ಬರೆಯುತ್ತಿದ್ದರು. ರಾಷ್ಟ್ರಕೂಟರ ಕಾಲದಿಂದ

ಕೃಷ್ಣದೇವರಾಯ ಕಾಲದವರೆಗೆ ವೈವಿಧ್ಯಮವಾಗಿ ಪ್ರಸಾರಗೊಂಡಿತ್ತು. ಹಲವಾರು ವಿದ್ವಾಂಸರಾಗಿದ್ದರು. ಲಕ್ಕಣ್ಣ ದಂಡೇಶ, ಜಕಣಾಚಾರ್ಯ ಹೆಸರಾಂತ ಸಾಹಿತಿಗಳಾದ ನಾಮಿನಿರ್ಮಡಿ, ಜಕ್ಕಿಸುಂದರಿ, ಕೇತಲದೇವಿ ಮತ್ತು ಶಾಂತಲೆ ಈಕೆ ಹೆಸರಾಂತ ನೃತ್ಯಗಾರ್ತಿಯಾಗಿ 'ಅಭಿನವ ಸರಸ್ವತಿ' ಎಂದು ಹೆಸರು ಪಡೆದುಕೊಂಡಿದ್ದಳು. ಇವರು ವಿದ್ಯೆಯೊಂದಿಗೆ ಸಂಗೀತ ನೃತ್ಯಕ್ಷೇತ್ರಗಳಿಗೆ ಕಾಲಿರಿಸಿದ್ದು ಮೊದಲಿಗರಾಗಿದ್ದರು. ಪ್ರತಿಯೊಂದರಲ್ಲಿ ಅನುಭವ ಪಡೆದಿದ್ದು, ಲಿಪಿಕಾರರು ಕವಿಗಳೂ ಇದ್ದರು. ಹಲವಾರು ಹಸ್ತಪ್ರತಿಗಳನ್ನು ಕೂಡ ಬರೆಸಿದ್ದರು. 'ಕಲಬುರಿಗಿ ದೇಶದಲ್ಲು ಕುಮಸಿ ನಗರಕೆ ಉಂಟಾದ ಮಠಪತಿ ಗುರು ಸ್ಥಳೀಕ ಪುರಾಣ ಕಲ–ವ, ಮನಿತಾನ ಪೂರ್ವ ಪೀಠಕರು.... ದೊಡ್ಡಯ್ಯ ತಮ್ಮ ಪ್ರೀತಿಯಲಿ ಬರೆಸಿದ ಪುಸ್ತಕ'.[೧೦] ಇದರಂತೆ ಬಹುಜನ ಲಿಪಿಕಾರರು ಪ್ರತಿಗಳನ್ನು ಬರೆಯುತ್ತಿದ್ದರು. ಅವರಿಗೆ ವಿಶೇಷ ಸನ್ಮಾನಗಳಿಂದ ಪೋಷಿಸಿ ಪ್ರೋತ್ಸಾಹ ನೀಡುತ್ತಿದ್ದರು. ಇವರು ಲಿಪಿಗೈಯುವಾಗ ಪ್ರತ್ಯೇಕವಾದ ನೆಲೆಗಳನ್ನು ಆಧರಿಸಿದ್ದು ಜೈನರು ಜಿನಾಲಗಳಲ್ಲಿ, ವೀರಶೈವರು ಮಠಗಳಲ್ಲಿ, ವೈದಿಕರು ಅಗ್ರಹಾರ ಮತ್ತು ಶೈವರು ಕೋಡಿಮಠಗಳಲ್ಲಿ ಧಾರ್ಮಿಕವಾದ ನೆಲೆಗಳನ್ನು ಕಂಡುಕೊಂಡು ಶ್ರದ್ಧಾಭಕ್ತಿಯಿಂದ ಲಿಪಿಗೈಯತ್ತಿದ್ದರು.

೧೬ನೆಯ ಶತಮಾನದಲ್ಲಿ ವಿಜಯನಗರ ಕಾಲದಲ್ಲಿ ಜನಸಮ್ಮುಖವಾದ ಅಭಿಪ್ರಾಯಗಳನ್ನು ಅನುಸರಿಸುತ್ತಿದ್ದರು. ಇವರಲ್ಲಿ ಹಲವಾರು ಭಾಷೆಯ ಕವಿಗಳು ಇದ್ದು ಅಷ್ಟದಿಗ್ಗಜರು ಸಾಧಿಸಿದ್ದರು. ಸರ್ವಜ್ಞ ತ್ರಿಪದಿಯ ಮೂಲಕ ಜನರಲ್ಲಿ ಆತ್ಮವಿಶ್ವಾಸವನ್ನು ವ್ಯಕ್ತಪಡಿಸುತ್ತಿದ್ದರು. ಲಿಪಿಕಾರರಿಗೂ ಪ್ರೋತ್ಸಾಹ ಕಲ್ಪಿಸಿಕೊಟ್ಟಿದ್ದರು.

'ಹಿರಿಯ ನಾನೆನಬೇಡ ಗುರುವ ನಿಂದಿಸಬೇಡ
ಬರೆವ ಕೂಡ ಹಗೆ ಬೇಡ ಬಂಗಾರ
ದೆರವು ಬೇಡೆಂದ ಸರ್ವಜ್ಞ'[೧೧]

ನಾನೆಂಬ ಅಹಂಕಾರದಿಂದ ಗುರುಗಳನ್ನು ನಿಂದಿಸದಿರು, ಬರೆಯುತ್ತಿರುವ ಲಿಪಿಕಾರರೊಡನೆ ವಾದ ವಿವಾದಗಳೊಂದಿಗೆ ಚರ್ಚಿಸದಿರು, ನಮ್ಮ ಆಸೆ ಆಮೀಷಗಳಿಗೆ ಒಳಗಾಗದಿರು. 'ತನ್ನರಿವೆಯೇ ತನಗೆ ಗುರು' ಎಂದಂತೆ ತನ್ನಲ್ಲಿಯೆ ಆತ್ಮವಿಶ್ವಾಸದೊಂದಿಗೆ ಅರಿವನ್ನು ಕಂಡುಕೊಂಡು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು. ಎಲ್ಲವನ್ನು ತಿಳಿದವನೇ ಈ ಜೀವಾತ್ಮನೆಂದು ಅವನೇ ಸರ್ವಮಯ ಸಂಪನ್ನ ಸರ್ವಜ್ಞನ ಎಂದು ಇತರರೊಂದಿಗೆ ತಿಳಿಸುತ್ತಿದ್ದರು.

೨೧ನೆಯ ಶತಮಾನದಲ್ಲೂ ಕನ್ನಡ ಸಂಸ್ಕೃತಿ ಇತಿಹಾಸದ ಘಟನೆಗಳನ್ನಾಧರಿಸುತ್ತದೆ. 'ಅಂದಿನ ಬರವಣಿಗೆಯ ಮುಖ್ಯ ಉದ್ದೇಶವೇ ಕೃತಿಯನ್ನು ಸ್ಮೃತಿಯಲ್ಲಿ ಉಳಿಸುವುದಾಗಿತ್ತು'[೧೨] ಎಂದು ಚಂದ್ರಶೇಖರ ಕಂಬಾರರ ಅಭಿಪ್ರಾಯ. ಪಂಪನು ಕಂಡುಕೊಂಡಿದ್ದ ಮಹಾಭಾರತದಲ್ಲಿ ಕೌರವ ಪಾಂಡವರ ನಡುವಿನ ಯುದ್ಧದ ಸನ್ನಿವೇಶ. ಈ ಕಥೆಯನ್ನು ಕೇಳಿದ್ದನು. ಅದನ್ನೇ ರೂಪಾಂತರಿಸಿ ಹೇಳಿದ್ದರೆ, ಆ ಕಥೆ ಅಲ್ಲಿಯೇ ಮರೆಯಾಗುತ್ತಿತ್ತು. ತನ್ನ ಕಲ್ಪನೆಯೊಂದಿಗೆ ನವಭಾರತವನ್ನೇ ಕಟ್ಟಿಕೊಡಲು ಪ್ರಯತ್ನಿಸಿದನು. ಅದುವೇ ಈ ಬರವಣಿಗೆಯ ಮೂಲವಾಗಿದೆ.

ಈ ಕನ್ನಡ ಹಸ್ತಪ್ರತಿಗಳಲ್ಲಿ ಬಹು ವಿದ್ವಾಂಸರ ಚಿಂತನೆಗಳ ಮೂಲಕ ಬರವಣಿಗೆಯ ಇಂದೆಂದಿಗೂ ನಲಿದಾಡುವ ವಿಶ್ವಕೋಶ ಎಂದೆನಿಸಿಕೊಳ್ಳುತ್ತಲಿದೆ. ಒಬ್ಬ ಅಸಾಮಾನ್ಯ ಲಿಪಿಕಾರ ಲಿಪಿಗೈದಿರುವ ಅಕ್ಷರಗಳನ್ನಾಧರಿಸಿಕೊಂಡಿರುವುದನ್ನು ಮೂಲವಾಗಿರಿಸಿ. ಇವು ಪ್ರತಿಯೊಬ್ಬರ ಕಣ್ಮನಗಳಲ್ಲಿ ಸೆಳೆದಾಡುತ್ತಲಿವೆ. ಅಕ್ಷರಗಳು ವರ್ಣಮಯವಾಗಿ ಸಾಲುಗಳಾಗಿ ಕಂಗೊಳಿಸುತ್ತಲಿವೆ. ಇಂದು ಕನ್ನಡ ಸಂಸ್ಕೃತಿ ಈ ಹಸಿರಿನಿಂದಲೇ ಬೆಳೆಯುತ್ತಲಿದೆ. ಈ ಬರವಣಿಗೆಯ ಮೂಲವಾಗಿಯೇ 'ಕನ್ನಡ ಭಾಷೆ ಶಾಸ್ತ್ರೀಯ ಸ್ಥಾನಮಾನ' ಅಲಂಕರಿಸಿದೆ. ಬರವಣಿಗೆ ಇತ್ತೀಚಿನ ದಿನಗಳಲ್ಲಿಯೂ ತನ್ನ ಘನತೆ, ಗೌರವಗಳನ್ನು ಹೆಚ್ಚಿಸಿಕೊಳ್ಳುತ್ತಲೇ ಇದೆ.

**೪.೨. ಬರವಣಿಗೆಯ ಸಾಮಗ್ರಿಗಳು :**

ಕನ್ನಡ ಹಸ್ತಪ್ರತಿಗಳು ಶಿಲೆ, ತಾಳೆಗರಿ, ಭೂರ್ಜಪತ್ರ, ಜಲಪತ್ರ, ಅಲೊಯಿ, ತಾಮ್ರಫಲಕ, ಹಿತ್ತಾಳೆ, ಕಂಚು, ಕಬ್ಬಿಣ, ತೊಗಟೆ, ಚರ್ಮ, ದಂತ ಸ್ಫಟಿಕ, ಆಮೆಚಿಪ್ಪು, ಅಗುರು, ಬಿದಿರು, ಅರಳಿ ಎಲೆ, ಜೇಡಿಮಣ್ಣು, ಕಡತ, ಬೆಳ್ಳಿ, ಬಂಗಾರ, ಹಲಗೆ ಮತ್ತು ಕಾಗದಗಳೂ ಬರವಣಿಗೆಯ ಸಾಮಗ್ರಿಗಳಾಗಿ ಬಳಕೆಯಾಗಿವೆ. ಇವೆಲ್ಲವುಗಳಲ್ಲಿ ತಾಳೆಗರಿ ವಿಶೇಷವಾಗಿ ತಾಳೆಗರಿಗಳಲ್ಲಿಯ ಹಲವಾರು ಕೃತಿಗಳು ನಮ್ಮ ಕನ್ನಡ ಸಂಸ್ಕೃತಿಯನ್ನು ಎತ್ತಿಹಿಡಿಯಲು ಕಾರಣವಾಗಿವೆ.

**ತಾಳೆಗರಿ :**

ತಾಳೆಗರಿಯು ದಕ್ಷಿಣ ಭಾರತದ ಪ್ರಮುಖ ಬರವಣಿಗೆಯ ಸಾಮಾಗ್ರಿಯಾಗಿದೆ. ತಾಳ, ಶ್ರೀತಾಳ, ತಾಳೆ, ಹಿಂತಾಳೆ, ತಾಲ, ಶ್ರೀತಾಳಿಕ, ಹಿಂತಾಳ, ತಾಟಿ, ಮತ್ತು ಪನೆ ಎಂದು ಮುಂತಾದ ಹೆಸರಿನಿಂದ ತಾಳೆವೃಕ್ಷವನ್ನು ನಮ್ಮ ಕನ್ನಡದ ಕವಿಗಳು ಗುರುತಿಸಿಕೊಂಡಿದ್ದಾರೆ. ತಮಿಳು ಕೃತಿಯಾದ 'ತಾಳವಿಲಾಸ'ದಲ್ಲಿ ತಾಳೆಗರಿಯ ಮಹತ್ವವನ್ನು ಪರಿಪೂರ್ಣವಾಗಿ ತಿಳಿಸಿಕೊಟ್ಟಿದ್ದಾರೆ. ಈ ತಾಳೆಗರಿಯಲ್ಲಿ ಎಂತಹ ಅಕ್ಷರಗಳನ್ನು ಬರೆದರೂ ಜೀವಂತವಾಗಿ ಸಂರಕ್ಷಿಸಬಲ್ಲದು. ಈ ತಾಳದಲ್ಲಿ ತಾಳ, ಶ್ರೀತಾಳ ಎಂದು ಎರಡು ವಿಧಗಳಲ್ಲಿ ಕಂಡುಬರುತ್ತದೆ. ತಾಳದಲ್ಲಿ ಒಂದೂವರೆ ಅಗಲ ಮತ್ತು ಒಂದೂವರೆ ಅಡಿ ಉದ್ದವಿರುತ್ತದೆ. ಇದು ಆಕಾರದಲ್ಲಿ ಸಣ್ಣದಾಗಿರುತ್ತದೆ. ಬಿರುಸಾಗಿರುತ್ತದೆ. ಬಗ್ಗಿಸಿದರೆ ಮುರಿಯುತ್ತದೆ. ಇದರಿಂದ ದೊಡ್ಡಕೃತಿಗಳು ಬರೆಯಲು ಸಾಧ್ಯವಾಗುವುದಿಲ್ಲ. ಇದಕ್ಕೆ ಹೆಚ್ಚು ಕಾಲಬಾಳಿಕೆ ಇರುವುದಿಲ್ಲ. ಇದಕ್ಕೆ ಕಡತ ಪತ್ರವೆಂತಲೂ ಕರೆಯುತ್ತಾರೆ. ಶ್ರೀತಾಳ ಎರಡು ಎರಡುವರೆ ಅಂಗುಲ ಅಗಲ ಮತ್ತು ಎರಡು ಎರಡುವರೆ ಅಂಗುಲ ಉದ್ದವಿರುತ್ತವೆ. ಇದು 'ಕೊರೈಪ ಉಂಬ್ರಾಕ್ಯುಲಿಫೆರ' ಸಸ್ಯ ಜಾತಿಗೆ ಸೇರಿದೆ ದೊಡ್ಡ ಮರವಾಗಿರುತ್ತದೆ. ಇದು ಬಗ್ಗಿಸಿದರೆ ಮಣಿಯುತ್ತದೆ. ನಮ್ಮ ಕರ್ನಾಟಕದಲ್ಲಿ ಕವಿರಾಜ ಮಾರ್ಗಕಾಲದಿಂದಲೂ ಕನ್ನಡದ ಬಹು ಹಸ್ತಪ್ರತಿಗಳು ಬರೆದಿರುವುದನ್ನು ಕಾಣುತ್ತೇವೆ. ಬಹುಕಾಲದವರೆಗೆ ತಾಳೆಗರಿಗಳನ್ನು ಸಂರಕ್ಷಿಸಬಹುದೆಂಬ ನಂಬಿಕೆಯಿದೆ. ಎಂಟುನೂರಾ ಒಂದು ಗುಣಗಳು ಇರುತ್ತವೆ. ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿಸುವುದು ಒಂದು ಗುಣವೆಂದು ಕರೆದುಕೊಂಡಿದೆ.

ಈ ತಾಳೆಗರಿಗಳು ದಕ್ಷಿಣ ಭಾರತದಲ್ಲಿ ಹೇರಳವಾಗಿ ಕಂಡುಬಂದಿವೆ. ನಂತರ ಉತ್ತರ ಭಾರತದಲ್ಲಿ ಸುದೀರ್ಘವಾಗಿ ಕಾಣಿಸಿಕೊಂಡವೆ. ಪಶ್ಚಿಮದ ಗುಜರಾತ, ಪೂರ್ವದ ಬಂಗಾಳದವರೆಗೆ ಹಬ್ಬಿಕೊಂಡಿವೆ. ತಮಿಳುನಾಡಿನಲ್ಲಿಯೇ ಮೊಟ್ಟಮೊದಲು ಕಂಡುಬಂದವು. ಇದರಿಂದಲೇ ಅವರು ತಾಳೆಗರಿಗಳನ್ನು ಬಳಸಿಕೊಂಡಿರಬಹುದು. 'ತಮಿಳುನಾಡು ತಾಳೆಗರಿಗಳ ತೊಟ್ಟಿಲು' ಎಂದು ಕರೆಯುತ್ತೇವೆ. 'ಅಂತು ನೋಡುತ್ತಮದನೇಕ ತಾಳೋತ್ಸೇಧಮುಮಭ್ರಂಕಷಮುಂ...'[೧೩] ದಕ್ಷಿಣ ಭಾರತವೇ ತಾಳವೃಕ್ಷಗಳ ನಾಡು ಎಂದೆನಿಸಿಕೊಂಡಿದೆ. ಅಲ್ಲಿ ಎತ್ತನೋಡಿದರೂ ತಾಳೆಗಳ ತಾಣಗಳೇ ಕಂಡುಬರುತ್ತವೆ ಅಲ್ಲಿನ ಪರಿಸರ ಉದ್ಯಾನವನಗಳಂತೆ ಶೃಂಗಾರ ಶೋಭೆ ತಳಿರು ತೋರಣಗಳಂತೆ ಹರಿದು ಹಾರಾಡುತ್ತಿರುವುದನ್ನು ನೋಡಿದರೆ ಕಣ್ಣುಗಳಿಗೆ ನಿಲುಕಲಾರದೆ ಹಚ್ಚುಹಸಿರಿನ ರಾಶಿಗಳಂತೆ ಕಾಣುತ್ತಿದ್ದವು ಎಂಬುದನ್ನು ಇಲ್ಲಿ ಕಾಣಬಹುದು.

ಅಲ್ಬೇರೂನಿ ತಾಳೆಗರಿಗಳನ್ನು ನೋಡಿ ಹೀಗೆ ಹೇಳಿದ್ದಾನೆ. ದಕ್ಷಿಣ ಇಂಡಿಯಾದಲ್ಲಿ ಖರ್ಜೂರ, ತೆಂಗಿನ ಮರಗಳಂತೆ ಇವು ಹಣ್ಣನ್ನು ಕೊಟ್ಟರೆ, ತಾಳೆಗಿಡಗಳು ಗರಿಗಳಿಂದ ಬರೆದಿರುವ ಅಕ್ಷರಗಳ ಮಾಲೆಯನ್ನೇ ನೀಡುತ್ತವೆ. ಈ ತಾಳೆಗರಿಗಳು ಒಂದರ ಮೇಲೊಂದು ಜೋಡಿಸಿ ಮಧ್ಯದಲ್ಲಿ ಎರಡು ರಂಧ್ರಗಳಿದ್ದು ದಾರದಿಂದ ಕಟ್ಟಿರುವುದನ್ನು ನೋಡಿ ಆಶ್ಚರ್ಯ ಚಕಿತನಾದನು. ತಾಳೆಗರಿಗಳನ್ನು ಬರೆಯುವ ಮೊದಲು ಗರಿಯ ಮೂಲೆಯನ್ನು ಕೊಯ್ದು ಆ ತುಂಡಿನ ಮೇಲೆ ದೇವರ ಹೆಸರು ಬರೆದು ಓಗೆಯುತ್ತಾರೆ. ಎಂದು ಬಾರ್ಬೋಸನು ವ್ಯಕ್ತಪಡಿಸಿದ್ದಾನೆ. ಲಿಪಿಕಾರರು ಬರೆಯುವ ಮೊದಲು ಈ ಕಾರ್ಯಗಳಿಂದ ಮುಕ್ತರಾಗುತ್ತಿದ್ದರು. ಬಂದಂತಹ ವಿಧಿಗಳು ದೂರ ಹೋಗಲಿ ಎಂಬ ನಂಬಿಕೆ ಇವರದ್ದಾಗಿತ್ತು. ಒಬ್ಬ ಹೆಣ್ಣು ಮಗಳು (ಮದುವೆಯಾದ ಸ್ತ್ರೀ) ಋತಿಮತಿಯಾದ ವಿಷಯವನ್ನು ತಾಳೆಗರಿಗಳ ಮೇಲೆ ಬರೆದು ಅರಿಷಿಣ, ಕುಂಕುಮ ಹಚ್ಚಿ ಎಲ್ಲರಿಗೂ ತಲುಪಿಸುತ್ತಿದ್ದರು. ತನ್ನ ಗಂಡನಿಗೂ ತಿಳಿಸುತ್ತಾರೆ. ಎಲ್ಲ ವಿಷಯಗಳಲ್ಲಿಯೂ ತಾಳೆಗರಿಗಳ ಬಳಕೆ ಕಂಡುಬಂದಿದೆ. ಇಂದಿಗೂ ಮದುವೆಯ ಸಮಯದಲ್ಲಿ ತಾಳೆಪತ್ರಗಳಂತೆ ಓಲೆಗಳನ್ನು ಕೊಡುವುದಕ್ಕೆ ಇಂತಹ ಧಾರ್ಮಿಕ ಅಂಶಗಳೇ ಸಾಕ್ಷಿ.

೧೯ನೆಯ ಶತಮಾನದಲ್ಲಿಯೂ ತಾಳೆಗರಿಗಳ ಬಳಕೆ ಕಂಡುಬಂದಿದೆ. ಶ್ರೀ ರಾಮಾಚಾರ್ಯರು ಬರೆದ ಕರ್ನಾಟಕ ಕಾದಂಬರಿ. ಶ್ರೀಮತ್ ಚನ್ನಪುರಿಯವರು ಜೈಮಿನಿ ಭಾರತ ಹಿಂದೂ ಭಾಷೆಯ ಸಂಜೀವಿನಿಯಾಗಿದೆ ಇಂತಹ ಕೃತಿಗಳನ್ನು ಲಿಪಿಕಾರರಿಂದ ತಾಳೆಗರಿಗಳಲ್ಲಿ ಬರೆಸಿದ್ದನ್ನು ನೋಡಬಹುದು. ಇನ್ನು ಕೆಲವು ವರ್ಷ ಜೀವಂತವಾಗಿರಲೆಂದು ಇವರ ನಂಬಿಕೆಯಾಗಿತ್ತು. ಹೀಗೆ ಹೆಚ್ಚು ಪ್ರಯೋಜನಕಾರಿಯಾಗಿರುವುದರಿಂದ ತಾಳೆಗರಿಯ ಬಗ್ಗೆ ಜನರಲ್ಲಿ ಆಸಕ್ತಿ ಹುಟ್ಟಿಕೊಂಡಿದೆ. ವೀರಶೈವ ಧರ್ಮದಲ್ಲಿ ವ್ಯಕ್ತಿಯ ಅಂತ್ಯಕ್ರಿಯೆ ಸಂದರ್ಭದಲ್ಲಿ ಮಂತ್ರಾಕ್ಷರಗಳನ್ನು ತಾಳೆಗರಿಗಳ ಮೇಲೆ ಬರೆದು ಸಮಾಧಿಯಲ್ಲಿಡುವುದು ಈಗಲೂ ಕಂಡುಬರುತ್ತದೆ. ಅಕ್ಷರಗಳು ಇರುವವರೆಗೂ ಇವರ ಹೆಸರು ಜೀವಂತವಾಗಿ ಇರಲಿ ಎಂಬುದು ಇಲ್ಲಿನ ನಂಬಿಕೆಯಾಗಿದೆ.

'ಕರ್ಕಶಂ ಕಲ್ಮಶಂ ವಕ್ರಂ ಹೀನಾಗ್ರಂ ಸ್ಫುಟಿತಂಯುಗಂ।
ತಾಲಪತ್ರಂನತತ್ ಶ್ರೇಷ್ಠಂ ಮತಂ ಲೇಖಾವಿಲೇಖನೇ॥'[೧೪]

ತಾಳೆಗರಿಗಳು ಮೃದುವಾಗಿರಬೇಕು. ಅಂಕುಡೊಂಕಾಗಿರಬಾರದು. ಸರಿಯಾಗಿ ಜೋಡಿಸಿರಬೇಕು. ಬರವಣಿಗೆಕಾರರಿಗೆ ಸ್ಪಷ್ಟವಾಗಿರಬೇಕು. ನೇರವಾಗಿರಬೇಕು, ಸೀಳಿಕೊಂಡಿರಬಾರದು. ಲಿಪಿಕಾರರಿಗೆ ಇವುಗಳಿಂದ ತಮ್ಮ ಬರವಣಿಗೆಗೆ ಚ್ಯುತಿ ಬಂದೀತೆಂದು ಸರಿಯಾದ ನಿಟ್ಟಿನಲ್ಲಿ ಸುಂದರವಾಗಿ ಕಾಣುವಂತೆ ಸ್ಫಟಿಕದಂತೆ, ಬಂಗಾರದ ಅರಳುಗಳಂತೆ ಅಕ್ಷರದ ಸಾಲುಗಳು ಕಾಣಬೇಕೆಂಬುದೇ ಇವರ ಉದ್ದೇಶವಾಗಿತ್ತು. ಲಿಪಿಕಾರರು ಒಂದು ಕಡೆ ತಾವೇ ಈ ರೀತಿ ವ್ಯಕ್ತಪಡಿಸಿಕೊಂಡಿದ್ದಾರೆ. ಏಕೆಂದರೆ ಇವುಗಳು ಸುದೀರ್ಘಕಾಲದವರೆಗೆ ಜೀವಂತ ಸನ್ನಿವೇಶಗಳನ್ನು ಹೊತ್ತಿನಿಂತಿರಬೇಕಾದುದರಿಂದ ಕಠಿಣ ಶ್ರಮಹಾಕಿ ಲಿಪಿಗೈದಿರುವುದನ್ನು ನೋಡುತ್ತೇವೆ.

**ಕಡತ (ಅರಿವೆ) :**

ಪ್ರಾಚೀನ ಕಾಲದಲ್ಲಿ ತಾಳೆಗರಿಗಳ ಬದಲಾಗಿ ಬಳಕೆಗೆ ಬಂದಿದ್ದು ಬಟ್ಟೆಯಿಂದ ಮಾಡಿದ ಕಡತಗಳು. ಇದು ದೀರ್ಘಕಾಲ ಬಳಕೆಗೆ ಬರುವಂಥ ವಸ್ತುವಲ್ಲವಾಗಿದ್ದರಿಂದ ಗ್ರಂಥಗಳನ್ನು ಬರೆದಿಲ್ಲ ಎಂದು ಹೇಳುಬಹುದು. ಕಚ್ಚಾ ಬರೆಯುವಾಗ, ದಪ್ಪನೆಯ ಅಕ್ಷರಗಳು ಬರೆಯುವಾಗ ಮಾತ್ರ ಇದನ್ನು ಉಪಯೋಗಿಸುತ್ತಿದ್ದರು. ಇಂದು ಕೂಡ ಬೋರ್ಡಗಳಿಗಾಗಿ ಬಳಸುವುದನ್ನು ನೋಡುತ್ತೇವೆ. ಕಡತ ಎಂದರೆ ಬರವಣಿಗೆಯ ಮುಂಚೆ ಕಚ್ಚಾ ಬರವಣಿಗೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಭೀಷ್ಮರು 'ಶರವೊಂದಂ ತೆಗೆದು ನಿಜೋದರರದಿಂ ಲೆಕ್ಕಣಿಕೆ ಮಾಡಿ, ಗಜಮದ ಮಸಿಯಂ ತರಿಸಿ, ಪತಾಕಾಪಟದೊಳ್ ಬರೆದಟ್ಟಿದನ್'.[೧೫] ಗದಾಯುದ್ಧದಲ್ಲಿ ಭೀಮನು ದುರ್ಯೋಧನನ ಚರ್ಮವನ್ನು ತೆಗೆದು ಲಿಪಿಕಾರರಂತೆ ಲಿಪಿಗೈಯುವೆನು ಕೊಬ್ಬಿದ ಸಿಂಹ ರಕ್ತವನ್ನು ತರಿಸಿ ಕೆಂಪಾಕ್ಷರದಿಂದ ಬರೆದು ಕೊಡುತ್ತೇನೆ. ಎಂದು ತನ್ನ ಆಕ್ರೋಶವನ್ನು ವ್ಯಕ್ತಪಡಿಸುತ್ತಾನೆ.

ಈ ಕಡತಗಳನ್ನು ರಾಜರ ಅರಮನೆಗಳಲ್ಲಿ ಮಂತ್ರಿಗಳು ಆಡಳಿತದ ಎಲ್ಲ ಲೆಕ್ಕಪತ್ರಗಳ ಖರ್ಚುವೆಚ್ಚಗಳಿಗಾಗಿ ಕಛೇರಿಗಳಲ್ಲಿ ಕೂಡ ಬಳಸಿಕೊಳ್ಳುತ್ತಿದ್ದರು. ಇಂತಹ ಕಛೇರಿಗಳಲ್ಲಿ ಬಳಕೆಯಾಗುತ್ತಿದ್ದಂತೆಯೇ ಇದಕ್ಕೆ 'ಕಡತದ ಚಾವಡಿ' ಎಂದು ಹೆಸರು ಕಂಡುಬಂದಿದೆ. 'ಬರಹವನರಿಯೆನಾ ಪದವಿಟ್ಟು ಕಡತದೊಳು ಮಾಡಿದ ಕೃತಿಯಲ್ಲ'[೧೬] ಎನ್ನುವ ಕನಕದಾಸರ ಮಾತು ಬರವಣಗೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದರು ಎಂಬುದನ್ನು ನೆನಪಿಗೆ ತರುತ್ತದೆ. ಕಡತವನ್ನು ನೇರವಾಗಿ ಸುರುಳಿಯಾಕಾರವಾಗಿ ಸುತ್ತಲೂಬಹುದು ಇಲ್ಲವೆ ಮಡಚಲು ಕೂಡ ಬರುತ್ತದೆ. ಮದ್ರಾಸ್ ಪ್ರಾಚ್ಯ ಸಂಶೋಧನೆಯಲ್ಲಿ ಕೆಳದಿ ನೃಪವಿಜಯವನ್ನು ಬರೆದ ಕಡತವಿದೆ. ಇದು ಕರುಡು ಪ್ರತಿಗೆ ಅತಿಮುಖ್ಯವಾದಂತಹ ಸಾಮಗ್ರಿಯಾಗಿತ್ತು. ಬಖೈರುಗಳು, ಕೈಫಿಯತ್ತುಗಳನ್ನು ಬರೆದಿರುವ ಕೆಲವೊಂದು ಕಡತಗಳನ್ನು ಹಸ್ತಪ್ರತಿ ಬಂಡಾರಗಳಲ್ಲಿ ನೋಡಬಹುದು. ಅಲ್ಲದೆ ಪ್ರಾರ್ಥನಾ ಪದ್ಯಗಳು, ಬಿಡಿ ವಚನಗಳು, ಮತ್ತು ಹಸ್ತಪ್ರತಿಗಳ ಪಟ್ಟಿಗಳು ಕೂಡ ಇವುಗಳಿಗಾಗಿ

ಉಪಯೋಗಿಸಿಕೊಳ್ಳುತ್ತಿದ್ದರು. ಇಂದಿಗೂ ಮಠ ಮಾನ್ಯಗಳಲ್ಲಿ, ಮನೆಗಳಲ್ಲಿ, ಪ್ರಾಚ್ಯ ಸಂಶೋಧನ ಸಂಸ್ಥೆಗಳಲ್ಲಿಯೂ ಕೂಡ ಕಡತಗಳನ್ನು ನೋಡುತ್ತೇವೆ.

**ಹಲಗೆ :**

ಪ್ರಾಚೀನ ಕಾಲದಲ್ಲಿ ಹಲಗೆಗಳನ್ನು ಬಳಸುತ್ತಿದ್ದರು. ಕಚ್ಚಾ ಬರವಣಿಗೆಗಾಗಿ ಬಳಸಿಕೊಳ್ಳುತ್ತಿದ್ದರು. ಪದ್ಯಗಳನ್ನು ಹಲಗೆ ಮೇಲೆ ಬರೆಯುತ್ತಿರುವಾಗ ಮೊದಲ ಹಂತದಲ್ಲಿ ಬರೆದು ನಂತರ ತಾಳೆಗರಿಗಳಲ್ಲಿ ಹೆಚ್ಚಾಗಿ ಬರೆಯುತ್ತಿದ್ದರು. 'ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ, ಬಳಸಿ ಬರೆಯಲು ಕಂಠಪತ್ರದ ಉಲುಹುಗೆಡದಗ್ಗಳಿಕೆ'.[೧೭] ಕುಮಾರವ್ಯಾಸರು ಈ ಸಾಲುಗಳು ಬರವಣಿಗೆ ಹಲಗೆಯನ್ನಾಗಿ ಉಪಯೋಗಿಸಿ ಕೊಳ್ಳುತ್ತಿದ್ದರೆಂದು ತಿಳಿಸುತ್ತದೆ. ತಾಳಪತ್ರಗಳಲ್ಲಿ ಬರೆಯಲು ಇದರಿಂದ ಬಹುಉಪಯುಕ್ತವಾಗುತ್ತಿತ್ತು. ಲಿಪಿಕಾರರು ಮಾರ್ಗ ಅಕ್ಷರಗಳನ್ನು ಯಾವ ಮಾರ್ಗದಲ್ಲಿ ಬರೆದರೆ ಸ್ಪಷ್ಟವಾಗಿ ಕಾಣುತ್ತವೆ. ಎಂಬುದನ್ನು ಅವರು ತಿಳಿದುಕೊಳ್ಳುತ್ತಿದ್ದರು ಮತ್ತು ಒತ್ತಕ್ಷರಗಳನ್ನು ಲಿಪಿಗೈಯುವಾಗ ಹೀಗೆ ಬರೆದರೆ ಇದಕ್ಕೆ ಸರಿಯಾಗಿ ಹೊಂದಾಣಿಕೆಯಾಗುತ್ತದೆ ಇಲ್ಲವೆಂದು ಅಕ್ಷರಗಳು ವಿನ್ಯಾಸದಲ್ಲಿ ಹೀಗೆ ಇರುಬೇಕೆಂದು ಕಂಡುಕೊಳ್ಳುವಲ್ಲಿ ಹಲಗೆ ಸಹಕಾರಿಯಾಗಿತ್ತೆಂದು ತಿಳಿಸಿಕೊಡುತ್ತದೆ. 'ಕ್ರಿಪೂ. ೫೯ ರಿಂದೀಚಿನ ಚೀನಿ ಪಂಚಾಂಗ ಹನ್ನೊಂದು ಮರದ ತುಂಡುಗಳು ಷಷ್ಟಿಕ್ರಮದ ಚಕ್ರದಲ್ಲಿ ಪ್ರತಿಯೊಂದರ ಸ್ಥಾನವನ್ನು ಸೂಚಿಸುತ್ತವೆ'.[೧೮] ವಿಶೇಷವಾಗಿ ಚೀನಿಯರು ಇಂತಹ ಪಂಚಾಂಗಳಿಗಾಗಿ ಉಪಯೋಗಿಸುತ್ತಿದ್ದರು. ಇದು ರಹಸ್ಯ ವಿಷಯಗಳನ್ನು ಮಂತ್ರ ತಂತ್ರಗಳನ್ನು ಬರೆದು ಅಕ್ಷರಗಳು ಕಾಣದಂತೆ ಜೇಡಿಮಣ್ಣನ್ನು ಸವರಿ ಯಾರಿಗೂ ಕಾಣದ ರೀತಿಯಲ್ಲಿ ಇವುಗಳನ್ನು ಪೋಷಿಸುತ್ತಿದ್ದರು. ಇವುಗಳನ್ನು ಕಾಪಾಡಿಕೊಳ್ಳಲು ಇದರ ಮೇಲೆ ಕೆಳಗೆ ಹಲಗೆಗಳಿಗೆ ಸುಣ್ಣದಕಲ್ಲು, ಇದ್ದಿಲು, ಇಟ್ಟಿಗೆಯ ದೂಳೂ ಮತ್ತು ಮೇಣವನ್ನು ಲೇಪಿಸಿ ಇಡುತ್ತಿದ್ದರು. ಅಕ್ಷರಗಳನ್ನು ಬರೆಯಲು ಕೆಲವೊಂದು ಚೂಪಾದ ಕಲ್ಲುಗಳನ್ನು ಬಳಸುತ್ತಿದ್ದರು. ಕಪ್ಪು ಬಣ್ಣವನ್ನು ಲೇಪಿಸಿ ಅಕ್ಷರಗಳು ಸರಿಯಾಗಿ ಕಾಣುವಂತೆ ಮಾಡುತ್ತಿದ್ದರು. ಹೆಚ್ಚಾಗಿ ಅವುಗಳನ್ನು ಲೇಖನಿ ಮತ್ತು ಕುಂಚವನ್ನು ಬಳಸಿಕೊಂಡು ಲಿಪಿಗೈದಿದ್ದಾರೆಂದು ಕಂಡುಕೊಳ್ಳಬಹುದಾಗಿದೆ. ಇಂದು ಕೂಡ ಶಾಲಾ ಕಾಲೇಜುಗಳಲ್ಲಿ 'ಕಪ್ಪುಹಲಗೆ' ಎಂಬ ಹೆಸರಿನಿಂದ ಬಳಸುತ್ತಿರುವುದನ್ನು ನೋಡುತ್ತವೆ. ಇದು ಹೆಚ್ಚಾಗಿ ಶಿಕ್ಷಕರು ಕಚ್ಚಾ ಬರವಣಿಗೆಗೆ ಬಳಸಿಕೊಳ್ಳುತ್ತಾರೆ.

**ಚರ್ಮ :**

ಅಂದಿನ ಕಾಲದಲ್ಲಿ ಚರ್ಮವನ್ನು ಬರವಣಿಗೆಗಾಗಿ ಬಳಸಿಕೊಂಡಿದ್ದರು. ಆದರೆ ಸುದೀರ್ಘ ಬರಹಗಳು ಇದರಲ್ಲಿ ಕಂಡುಬಂದಿಲ್ಲ. ಕೆಲವೊಂದು ಸಣ್ಣಕೃತಿಗಳನ್ನು ಬರೆದಿರುವುದು ಕಂಡುಬಂದಿದೆ. ಪುಸ್ತಕ ಎಂಬುದು ಪೋಸ್ತು ಎಂಬ ಪದದಿಂದ ನಿಷ್ಪನ್ನವಾಗಿದೆ. ಇದರ ಅರ್ಥ ಚರ್ಮವೆಂದು ಸ್ಪಷ್ಟಪಡಿಸಲಾಗಿದೆ. 'ವಿಶ್ವಂಗಣಯಾತೋ ಧಾತುಶ್ಯಶಿ ಕಟಿನೀ ಖಂಡೇನ ತಮೋ ಮಷೀ ಶ್ಯಾಮೇ ಅಜಿನ ಇವ ವಿಯತಿ ಸಂಸಾರಸ್ಯತಿಶೂನ್ಯತ್ವಾತ್ ಶೂನ್ಯ ಬಿಂದವ ಇವ ವಿಲಿಖಿತಾಃ....

ತಾರಾವ್ಯರಾಜನ್ತ್'.[೯] ಸುಬಂಧುವಿನ ವಾಸವದತ್ತಾದಲ್ಲಿ ಅಕ್ಷರಗಳನ್ನು ವರ್ಣಿಸುವಾಗ ಈ ಮಾತನ್ನು ಹೇಳುತ್ತಾನೆ. ವಿಶ್ವದಲ್ಲಿರುವ ಪ್ರತಿಯೊಂದು ಉಪಯುಕ್ತವಾದವುಗಳು. ಪ್ರತಿಯೊಂದೂ ಕೆಲಸಕ್ಕನುಗುಣವಾಗಿ ಆಯಾ ವಸ್ತುಗಳನ್ನು ಬಳಸಿಕೊಂಡು ನಮ್ಮ ಕಾರ್ಯಗಳನ್ನು ಯಶಸ್ವಿಗೊಳಿಸಿಕೊಳ್ಳಬೇಕು. ಯಾವ ವಸ್ತುವನ್ನು ಅಸಭ್ಯವಾಗಿ ಕಾಣಬಾರದು. ಅದಕ್ಕನುಗುಣವಾಗಿ ಅದನ್ನು ಬಳಸಿಕೊಳ್ಳಬೇಕೆಂದು ಸ್ಪಷ್ಟಪಡಿಸುತ್ತದೆ. ಈಜಿಪ್ಟ್‌ನ ಪಶ್ಚಿಮ, ಏಷಿಯಾ, ಪರ್ಶಿಯ, ಇರಾಕ್ ಮತ್ತು ತುರ್ಕಿಸ್ತಾನಗಳಲ್ಲಿ ಚರ್ಮ ಸಾಕಷ್ಟು ಜನಪ್ರಿಯವಾದ ಬರಹ ಸಾಮಗ್ರಿಯಾಗಿತ್ತು. ಸಾಮಾನ್ಯವಾಗಿ ಕುರಿ, ಧನ, ಜಿಂಕೆ ಮತ್ತು ಸಾರಂಗಗಳ ಚರ್ಮವನ್ನು ಬರವಣಿಗೆ ಬಳಸುತ್ತಿದ್ದರು. ಸಂಗೀತವಾದ್ಯಗಳಿಗಾಗಿ ಇಂದು ಕೂಡ ಬಳಸಿಕೊಳ್ಳುತ್ತೇವೆ. ಈ ಪ್ರಾಣಿಗಳ ಚರ್ಮ ಋಷಿಮುನಿಗಳು ಮಂತ್ರಸಿದ್ಧಿ ಪಡೆದುಕೊಳ್ಳಬೇಕಾದರೆ ಜಿಂಕೆ, ಹುಲಿಯ ಚರ್ಮಗಳನ್ನು ಆಸನವನ್ನಾಗಿ ಬಳಸಿಕೊಳ್ಳುತ್ತಿದ್ದರು. ಅಲ್ಲದೆ ಕೆಲವೊಂದು ಹಸ್ತಪ್ರತಿಗಳಿಗೆ ರಕ್ಷಾಕವಚವಾಗಿಯೂ ಉಪಯೋಗಿಸಿದ್ದಾರೆ.

'ಈಜಿಪ್ಟಿನ ಕ್ರೈಸ್ತರ ಒಂದು ಪಂಗಡವಾದ ಕಾಸ್ಟಿಕ್ ಜನರಿಗೆ ಸೇರಿದ ಬೈಬಲ್ಲಿನ ಒಂದು ಹಾಳೆ ಚರ್ಮದ್ದಾಗಿದೆ. ಈ ಚರ್ಮದಿಂದ ಬರೆದ ಕೃತಿಗಳು ಬಹುಕಾಲ ಉಳಿಯುವುದಿಲ್ಲ. ಬರವಣಿಗೆಗೆ ಯೋಗ್ಯವಾದುದಲ್ಲ ಎಂದು ತಿಳಿದುಕೊಂಡು ತಾಳೆಗರಿಗಳಲ್ಲಿ ಬರೆದರೆ ಅಕ್ಷರಗಳು ಬಹುಕಾಲದವರೆಗೆ ಇರುತ್ತವೆಯೋ ಎಂದು ತಾಳೆಗರಿಗಳನ್ನು ಬಳಸಿಕೊಳ್ಳಲು ಪ್ರಾರಂಭಿಸಿದರು.

**ಶಿಲೆ :**

ಬರವಣಿಗೆಯ ಸಾಮಗ್ರಿಗಳಲ್ಲಿ ನೈಸರ್ಗಿಕ ರೂಪದಿಂದ ಹೇರಳವಾಗಿ ದೊರೆಯುವ ಲಿಖಿತ ಆಧಾರಗಳೇ, ರಾಜರ ಆಜ್ಞೆಗಳೇ ಶಾಸನಗಳು. ಅನೇಕ ರಾಜ ಮಹಾರಾಜರು ತಾವು ಮಾಡಿದ ಸಾಹಸ ಹಾಗೂ ಜನೋಪಯೋಗಿ ಕಾರ್ಯಗಳು ಮುಂದಿನ ಜನರಿಗೆ ತಿಳಿಯಲಿ ಎಂದುಕೊಂಡು ದೊಡ್ಡ ಬಂಡೆಗಲ್ಲುಗಳಲ್ಲಿ, ಪ್ರಮುಖವಾಗಿ ಸಾರ್ವಜನಿಕರು ಸೇರುವ ಸ್ಥಳಗಳಲ್ಲಿ, ರಾಜಬೀದಿಗಳಲ್ಲಿ, ದೇವಾಲಯ ಸ್ತಂಬಗಳಲ್ಲಿ ಮತ್ತು ಕಟ್ಟಡಗಳ ಮೇಲ್ಚಾವಣಿಯ ಬಂಡೆಗಳಲ್ಲಿ ಶಾಸನಗಳು ಸುರಕ್ಷಿತವಾಗಿರಲಿ ಎಂದು ಬರೆಸುವುದನ್ನು ಕಾಣುತ್ತೇವೆ.

ಈ ಶಾಸನಗಳು ರಾಜರು ಬೇರೆ ರಾಜ್ಯಗಳ ಮೇಲೆ ದಂಡೆತ್ತಿ ಹೋದಾಗ ಆ ರಾಜ್ಯವನ್ನು ಗೆದ್ದ ಸವಿನೆನಪಿಗಾಗಿ, ತಾವು ಕೈಗೊಳ್ಳುತ್ತಿರುವ ಆಡಳಿತದ ಸೂತ್ರಗಳು, ಕೈಗೊಂಡಿರುವ ಸಾಹಸ ಸಾಧನೆಗಳು, ವೇದೋಪನಿಷತ್ತುಗಳು, ರಾಮಾಯಣ ಮಹಾಭಾರತದ ಸನ್ನಿವೇಶಗಳು, ಧರ್ಮಗ್ರಂಥಗಳ ಸೂತ್ರಗಳು ಮೊದಲಾದವುಗಳನ್ನು ಶಾಸನ ರೂಪಗಳಲ್ಲಿ ಕಾಣಬಹುದು. ಮತ್ತು ಈಜಿಪ್ಟ್ ಹಾಗೂ ಮೆಸಪೊಟೆಮಿಯಗಳಲ್ಲಿ ಒರಟಾದ ನಯವಾದ ಬಂಡೆಗಳ ಮೇಲೆ ಇಂತಹ ಸನ್ನಿವೇಶಗಳನ್ನು ಸಾರ್ವಜನಿಕರಿಗೆ ತಿಳಿಸಲು ಶಾಸನಗಳ ಉದ್ದೇಶವಾಗಿದೆ.

ಮೊದಲ ಕನ್ನಡ ಶಾಸನ ಕ್ರಿ.ಶ.೪೫೦ರ ಹಲ್ಮಿಡಿ ಶಾಸನವಾಗಿದೆ. ಅಶೋಕನ ಶಿಲಾಸ್ತಂಭಗಳಲ್ಲಿ ಬರವಣಿಗೆ ಕಂಡುಬಂದಿದೆ. ಅಶೋಕನು ಬೌದ್ಧಧರ್ಮವನ್ನು ಸ್ವೀಕರಿಸಿದ ನೆನಪಿಗಾಗಿ ಶಾಸನಗಳನ್ನು

ಬರೆಯುವ ಸಾಹಸಕ್ಕೆ ಕೈಹಾಕಿದನು. ಇದರೊಂದಿಗೆ ಅವರು ಮುದ್ರೆಗಳನ್ನು ಬಳಸಿಕೊಳ್ಳುತ್ತಿದ್ದರು. ಅವರು ಬಳಸುತ್ತಿರುವ ಆಡಳಿತ ಕಛೇರಿಗಳಲ್ಲಿ ರಾಜಮುದ್ರೆ ಕಡ್ಡಾಯವಾಗಿರುವಂತೆ ಆಳವಡಿಸಿಕೊಂಡಿದ್ದರು. ಇಂತಹ ಮುದ್ರೆಗಳನ್ನು 'ಮೊದಲಿಗೆ ಕ್ರಿ.ಶ ೯ನೆಯ ಶತಮಾನದಲ್ಲಿ ಚೀನಿಯರು ಪಡಿಯಚ್ಚುಗಳಾಗಿ ಬಳಸಿಕೊಂಡಿದ್ದರು'.[೨೦] ಇಂತಹ ಆಧಾರಗಳ ಮೂಲವಾಗಿ ಇಂದು ಕೂಡ ಚಲಾವಣೆಯಲ್ಲಿ ಕಂಡುಬಂದಿದೆ. ಕಾನೂನುಗಳು, ಒಪ್ಪಂದಗಳು, ಆಡಳಿತ ಸೂತ್ರಗಳು, ಜನರ ಆಸ್ತಿ-ಪಾಸ್ತಿಗಳ ದಾಖಲೆಗಳು ಮತ್ತು ವ್ಯವಹಾರದ ನಿಯಮಗಳನ್ನು ಒಳಗೊಂಡ ದಾಖಲಾತಿಗಳು ಮುಂತಾದವುಗಳ ಮೇಲೆ ಮುದ್ರೆಯ ಅಂಕಿತವನ್ನು ಹಾಕುತ್ತಿರುವುದು ಕಂಡುಬರುತ್ತದೆ.

**ಆಮೆಚಿಪ್ಪು :**

ಪ್ರಾಚೀನ ಕಾಲದಲ್ಲಿ ಬರವಣಿಗೆಯ ಸಾಮಗ್ರಿಗಳು ಅಪರೂಪ ನಮಗೆ ಆಧಾರಗಳಾಗಿ ದೊರೆತಿರುವುದು ಚೀನಾ ದೇಶದಲ್ಲಿ ಮೊದಲು ಆಮೆಚಿಪ್ಪು ಮತ್ತು ಪ್ರಾಣಿ ಮೂಳೆಗಳ ಮೇಲೆ ಕಂಡುಬಂದಿರುವ ಅಂಶಗಳು ತಿಳಿದುಬಂದಿವೆ. ಈ ಬರವಣಿಗೆಗಳು ಚೀನಿಯರ ಸಂಬಂಧ ಪಡೆದಿದ್ದರು ಎಂಬುವುದನ್ನು ಬರವಣಿಗೆಯ ಆಧಾರವೇ ತಿಳಿಸಿಕೊಡುತ್ತದೆ. ಈ ಬರವಣಿಗೆಯು ಆಗ್ನೇಯ ಭಾಗದ ಏಶಿಯಾದಲ್ಲಿ ಮಾತ್ರ ಕಂಡುಬಂದಿದೆ. ಹಾಗೂ ಏಶಿಯಾ ಮತ್ತು ಉತ್ತರ ಆಫ್ರಿಕಾದ ಭಾಗದಲ್ಲಿ ಪ್ರಾಣಿಗಳನ್ನು ಭೇಟೆಯಾಡಿ ಅವುಗಳ ಮೂಳೆಗಳ ಮೇಲೆ ಬರವಣಿಗೆ ಮಾಡಲಾಗುತ್ತಿತ್ತು. ಕುರಿ, ಮೇಕೆ, ಒಂಟೆ ಮತ್ತು ಕುದುರೆಗಳು ಅವರ ದೇಶದಲ್ಲಿ ಹೇರಳವಾಗಿ ಕಂಡುಬರುತ್ತವೆ. ಆದ್ದರಿಂದ ಇವುಗಳ ಮೂಳೆಗಳು ಬಹು ಉದ್ದವಾಗಿದ್ದು, ಬರವಣಿಗೆ ಉಪಯುಕ್ತವಾಗಿದ್ದವು. ಪ್ರಮುಖ ವಿಷಯಗಳಿಗಾಗಿ, ಮಂತ್ರ ತಂತ್ರಗಳಿಗಾಗಿ, ಧರ್ಮ ಗ್ರಂಥಗಳಿಗಾಗಿ, ಗುಪ್ತ ವಿಚಾರಗಳಿಗಾಗಿ, ವೇದೋಪನಿಷತ್ತುಗಳಿಗಾಗಿ, ಧಾರ್ಮಿಕ ಅಂಶಗಳಿಗಾಗಿ ಮಾತ್ರ ಉಪಯೋಗಿಸಿ ಕೊಂಡಿರುವುದು ಕಂಡುಬಂದಿದೆ. ಇವುಗಳ ಮೇಲೆ ಅಕ್ಷರಗಳು ಬರೆದರೆ ಜೀವಂತವಾಗಿರುತ್ತವೆ.

**ದಂತ :**

ಹಿಂದಿನ ಕಾಲದಲ್ಲಿ ಆನೆಯ ದಂತ ಉಪಯೋಗಿಸಿಕೊಂಡಿರುವುದನ್ನು ಕಾಣುತ್ತೇವೆ. ಈ ದಂತ ಬರವಣಿಗೆಯ ಸಾಮಾಗ್ರಿಯಾಗಿದ್ದು ವಿಸ್ಮಯವಾಗಿದೆ. ಪ್ರಾಣಿಗಳಲ್ಲಿ ಬಹುಮುಖ್ಯವಾದ ಪ್ರಾಣಿ ಇದಾಗಿದೆ. ದಂತ ಚಿಕ್ಕದಾಗಿದ್ದರೂ ಅದಕ್ಕೆ ಬೆಲೆ ಕಟ್ಟಲಾರದಷ್ಟು ವಸ್ತು ಇದಾಗಿದೆ. ಇಂತಹ ದಂತವನ್ನು ಬರವಣಿಗೆಗೆ ಉಪಯೋಗಿಸುವ ಚಾಕ ಚಕ್ಯತೆಯ ಕಲೆ ಕೇವಲ ಆಗ್ನೇಯ ಏಶಿಯಾದವರಿಗೆ ಮಾತ್ರ ಸೀಮಿತವಾಗಿತ್ತು.

'ಬೌದ್ಧ ಧರ್ಮಗ್ರಂಥಗಳ ಉದ್ದುದ್ಧವಾಗಿರುವ ಭಾಗಗಳನ್ನು ಅಗಲವಾದ ತೆಳ್ಳನೆಯ ದಂತದ ಹಾಳೆಗಳ ಮೇಲೆ, ಎತ್ತರಿಸಿದ ರಾಳಗಳ ಮೆರುಗಿನ ಅಕ್ಷರಗಳಲ್ಲಿ ಬರೆದಿಡುತ್ತಿದ್ದರು'.[೨೧] ಈ ದಂತಗಳು ಇಂದು ಕೂಡ ಬಹು ಹೆಗ್ಗಳಿಕೆಯನ್ನು ಸಾಧಿಸುತ್ತಲೇ ಇವೆ. ಇವುಗಳಿಂದ ಬರೆದ ಪ್ರಮುಖವಾದ

ಗ್ರಂಥಗಳು ಧಾರ್ಮಿಕ ಅಂಶಗಳಾದ ನೀತಿ ಮಾರ್ಗಗಳಿಗೆ, ಯಾರನ್ನು ವಿಶೇಷವಾಗಿ ಆಹ್ವಾನಿಸ ಬೇಕಿತ್ತೋ ಅವರಿಗಾಗಿ, ಸಾಮಾಜಿಕ ಸ್ಥಾನ ಮಾನಗಳನ್ನು ಪ್ರತ್ಯೇಕವಾಗಿ ಪ್ರತಿಬಿಂಸುವ ಕಾರಣಗಳಿಗೆ ಪ್ರತ್ಯೇಕವಾಗಿ ಬಳಸಿಕೊಳ್ಳುತ್ತಿದ್ದರು. ಈ ಬರವಣಿಗೆಯ ಅಕ್ಷರಗಳು ಸ್ಫಟಿಕದ ಸಲಾಕೆಯಂತೆ ವರ್ಣಮಯವಾಗಿ ಕಂಗೊಳಿಸುತ್ತಿದ್ದವು. ಅಕ್ಷರಗಳು ಕಪ್ಪು ಬಣ್ಣ ಲೇಪಿಸಿದ್ದರೂ ಚಿನ್ನ ವಜ್ರಗಳ ಹರಳುಗಳನ್ನು ಅಲ್ಲಲ್ಲಿ ಲೇಪಿಸಿ ಸುತ್ತಲೂ ಹೆಣೆದುಕೊಳ್ಳುವಂತೆ ನೋಡಲು ಆಶ್ಚರ್ಯ ಚಕಿತವಾಗಿ ಕಾಣುತ್ತಿದ್ದವು. ಅಷ್ಟೇ ತೆಳುವಾದ ಮೃದುವಾದ ಬಿಳಿ ಹಾಳೆಗಳಂತೆ ಕಂಗೊಳಿಸುತ್ತಿರುವುದನ್ನು ನೋಡಬಹುದು. ಇದರಿಂದ ಅಕ್ಷರಗಳು ಶಾಶ್ವತವಾಗಿ ನಿಜ ನೈದಿಲೆಯಾಗಿ ಅಜರಾಮರವಾಗಿ ಇಂದೆಂದಿಗೂ ಜೀವಂತವಾಗಿರಲಿ ಎಂಬುದೇ ಇವರ ಮೂಲ ಉದ್ದೇಶವಾಗಿತ್ತು.

**ಬಿದಿರು :**

ಪ್ರಾಚೀನ ಕಾಲದಲ್ಲಿ ಬಹುವಿರಳವಾಗಿ ಬಳಸಿಕೊಳ್ಳುತ್ತಿರುವ ಸಾಮಾಗ್ರಿಯಾಗಿದೆ. ಬಿದಿರು ಬಹುಕಾಲದವರೆಗೂ ಬಾಳಿಕೆ ಬರುತ್ತದೆ. ಇದರ ಗಾತ್ರ ಬಹುವಿಶಾಲವಾಗಿದ್ದು ಮುಗಿಲೆತ್ತರಕ್ಕೆ ಬೆಳೆದು ನಿಲ್ಲುವ ಸಸ್ಯವೃಕ್ಷವೇ ಇದಾಗಿದೆ. ಇದು ಮಲೆನಾಡಿನ ಪ್ರದೇಶದಲ್ಲಿ ಶೀತ ಪ್ರದೇಶದಲ್ಲಿ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಅಷ್ಟೇ ಗಟ್ಟಿ ಮುಟ್ಟಾಗಿ ಬಹುದಿನಗಳವರೆಗೆ ಕ್ರಿಮಿ ಕೀಟಗಳಿಂದಲೂ ಜೀವಂತವಾಗಿ ಮುಕ್ತವಾಗಿರುವ ಬಿದಿರು ಇದಾಗಿದೆ. ರೈತರು ಇಂದಿಗೂ ಬಿದಿರಿನಿಂದ ಮಾಡಿದ 'ಖರ್ಚಿ'ಯನ್ನಾಗಿಸಿ ಕಾಳುಗಳನ್ನು ಸಂಗ್ರಹಿಸಿಕೊಳ್ಳಲು ಬಳಸುತ್ತಾರೆ. ಹಡಗು, ಮನೆ, ಗುಡಿಸಲುಗಳಿಗೆ ಜಂತಿಗಳಾಗಿಯೂ ಬಳಸುತ್ತಾರೆ.

ಈ ಬಿದಿರು ಬರವಣಿಗೆಯು ಸಾಹಿತ್ಯದಲ್ಲಿಯೂ ಹೆಸರು ಪಡೆದುಕೊಂಡಿದೆ. ಪ್ರತ್ಯೇಕವಾಗಿ ಚೀನಿಯರು ಆಗ್ನೇಯ ಏಶಿಯಾದವರು ಈ ಕಲೆಯಲ್ಲಿ ಕುಶಲರಾಗಿದ್ದರು. 'ವಿಶೇಷತಃ ಸುಮಾತ್ರಾ ದ್ವೀಪದಲ್ಲಿ ಇಂದಿಗೂ ಬಿದಿರನ್ನು ಬರವಣಿಗೆಗಾಗಿ ಬಳಸುತ್ತಾರೆ'.[೨೨] ನೀರಿನಿಂದ ನೆನೆದರೂ ಕೆಡದಿರುವುದು ಬಹುದಿನಗಳವರೆಗೂ ಕ್ರಿಮಿ ಕೀಟಗಳಿಂದ ಬಾದಿತವಾಗದ ಗುಣ ಇದಕ್ಕಿದೆ. ಈ ಬಿದಿರಿನ ಬರವಣಿಗೆಯುಳ್ಳ ಪ್ರತಿಗಳು ಮೊದಲು ಕಛೇರಿಗಳ ಆಡಳಿತ ಉದ್ದೇಶಗಳಿಗಾಗಿ ಬಳಸಿಕೊಳ್ಳುತ್ತಿದ್ದರು. ಕಾಲಾಂತರದಲ್ಲಿಯೂ ಸಾಹಿತ್ಯ ಕ್ಷೇತ್ರದಲ್ಲಿಯೂ ಬಳಕೆಯಾಗುತ್ತ ಬಂದವು. ಕಾಲಾಂತರದಲ್ಲಿ ಅಲ್ಲಲ್ಲಿ ಕಾಣಿಸಿಕೊಂಡವು. 'ಸುಮಾತ್ರದಲ್ಲಿ ದೊರೆತ ೧೯ನೆಯ ಶತಮಾನದ ಒಂದು ಹಸ್ತಪ್ರತಿ, ನಾಲ್ಕು ಬಿದಿರಿನ ತುಂಡುಗಳನ್ನು ಒಟ್ಟಿಗೆ ಸೇರಿಸಿ ಒಂದು ಟೊಳ್ಳಾದ ಉರುಳೆ ಕೊಳವೆಯನ್ನು ಮಾಡಲಾಗಿದೆ'.[೨೩] ಈ ಹಸ್ತಪ್ರತಿಗಳು ಬರೆಯಲು ರಕ್ಷಿಸಿಕೊಳ್ಳಲು ಬಿದಿರು ಸಹಕಾರಿ. ಇದರ ಗರಿಯು ಬಹುಉದ್ದವಾಗಿದ್ದು ಮತ್ತು ಮೂರು ಮೂರುವರೆ ಅಂಗುಲ ಅಗಲ ಇರುತ್ತವೆ. ಇದರಲ್ಲಿಯ ಅಕ್ಷರಗಳು ಸುದೀರ್ಘವಾಗಿ ಕಣ್ಣಿಗೆ ರಾಚುವಂತೆ ಕಂಗೊಳಿಸುತ್ತವೆ. ಅಕ್ಷರಗಳನ್ನು ಕೆತ್ತಲು ಒಂದು ಚೂಪಾದ ಚೂರಿಯನ್ನು ಬಳಸುತ್ತಿದ್ದರು. ಇಂತಹ ಗ್ರಂಥಗಳು ಭಾರವೆನಿಸಿಕೊಂಡಿದ್ದವು. ಉಪಯೋಗಿಸಲು ಬೇಸರವೆನಿಸುತ್ತಿತ್ತು. ಒಬ್ಬ ಕವಿ ಪ್ರಯಾಣಕ್ಕೆ ಹೋಗಬೇಕಾದರೆ ಅವರ ಗ್ರಂಥಗಳಿಗಾಗಿ

ಒಂದು ಪ್ರತ್ಯೇಕ ಗಾಡಿಯೇ ಬೇಕಾಗಿತ್ತು. ಇವೆಲ್ಲವುಗಳಿಂದ ಬೇಸತ್ತಕೊಂಡು ಹೋಗಿದ್ದರು. ಆದರೂ ಬರವಣಿಗೆಯನ್ನು ಬಹುದಿನಗಳವರೆಗೂ ಸಂರಕ್ಷಿಸುವುದು ಹಾಳಾಗದಂತೆ ಇರುವುದು ಕಂಡುಬಂದಿದೆ. ಬಿದಿರಿನ ಹಾಳೆಗಳಲ್ಲಿನ ಬರವಣಿಗೆ, ತಾಳೆಗರಿಗಳಂತೆ ಅಕ್ಷರಗಳನ್ನು ಸುಮಾರು ದಿನಗಳವರೆಗೂ ರಕ್ಷಿಸುವುದನ್ನು ಕಾಣುತ್ತೇವೆ.

**ತೊಗಟೆ :**

ಪ್ರಾಚೀನ ಕಾಲದಲ್ಲಿ ಬರವಣಿಗೆಗಾಗಿ ತೊಗಟೆಗಳನ್ನು ತಾಳೆಗರಿಗಳಂತೆ ಉಪಯೋಗಿಸಿಕೊಂಡು ಲಿಪಿಗೈದಿರುವುದನ್ನು ನೋಡುತ್ತೇವೆ. ಮರದ ಒಳಪದರವು ಮೃದುವಾಗಿದ್ದು, ಇದು ಬಿಳಿಹಾಳೆಯಂತೆ ಕಂಡುಬರುತ್ತದೆ. ಇವುಗಳನ್ನು ಒಂದೇ ರೀತಿಯಿಂದ ಪೋಣಿಸಿ, ಎಲ್ಲವುಗಳಿಗೆ ಎಣ್ಣೆ ಸವರಿ ದಾರ ಕಟ್ಟುತ್ತಿದ್ದರು. ಇಲ್ಲವೆ ಹಾಳೆಗಳನ್ನು ಮಡಚಿ ಮೊದಲು ಎರಡು ಮಡಕೆಗಳನ್ನು ನಾಲ್ಕು ಮಡಕೆಗಳನ್ನಾಗಿ ಮಾಡಿದ ಪುಸ್ತಕದಂತೆ ಕಾಣುತ್ತದೆ. ಇದಕ್ಕೆ ಭೂರ್ಜ ಪತ್ರವೆಂದೂ ಕರೆಯುತ್ತಾರೆ. ಭಾರತದ ವಾಯುವ್ಯ ಹಾಗೂ ಹಿಮಾಲಯ ಪರ್ವತಗಳಲ್ಲಿ ಭೂರ್ಜಪತ್ರಗಳೆಂದು ಈಶಾನ್ಯ ಭಾಗದಲ್ಲಿ ಲೋಳಿಸರಗಳೆಂದು ಕರೆಯುತ್ತಾರೆ. ಇಂಥ ಹಾಳೆಗಳು ಕ್ರಿಸ್ತಶಕದ ಆರಂಭದಿಂದಲೇ ಬಳಕೆಗೆ ಬಂದಿವೆ. ಸಂಸ್ಕೃತ ಗ್ರಂಥಗಳು, 'ಶಾರದಾ ಲಿಪಿಯಲ್ಲಿ ಮಹಾಭಾರತದ ಆದಿಪರ್ವದ ಒಂದು ಪ್ರತಿ. ಕಾಳಿದಾಸನ ವಿಕ್ರಮೋರ್ವಶೀಯ ನಾಟಕದ ಭೂರ್ಜಪತ್ರ'.[೨೪] ಇಂತಹ ಕೃತಿಗಳು ವಿಶೇಷವಾಗಿ. ಕಾಶ್ಮೀರದಲ್ಲಿ ಬಳಕೆಯಲ್ಲಿದ್ದವು. ಈ ಪ್ರತಿಗಳಿಗೆ ರಕ್ಷಣೆಗೆ ಮರದ ತೊಗಟೆ, ಚರ್ಮದ ಹೊದಿಕೆಯನ್ನು ಬಳಸಿದ್ದರು. ಆ ಪ್ರದೇಶದಲ್ಲಿ ತಾಳೆಗರಿಗಳು ಕಂಡುಬಂದಿರಲಿಲ್ಲ. ಆದ್ದರಿಂದಲೇ ಇಂತಹ ಮರಗಳು ಹೇರಳವಾಗಿ ದೊರೆಯುತ್ತಿದ್ದವು. ಇವು ಕೆಲವು ದಿನಗಳ ವರೆಗೆ ಅಕ್ಷರಗಳನ್ನು ಜೀವಂತವಾಗಿಡಬಹುದೆಂದು ನಂಬಿದ್ದರು.

**ಅರಳಿ ಎಲೆ :**

ಪೂರ್ವಕಾಲದಲ್ಲಿ ಬರವಣಿಗೆಯ ಸಾಮಗ್ರಿಯಾಗಿದ್ದು ತೀರ ಕಡಿಮೆ ಎಂದು ಹೇಳಬಹುದು. ಇದು ಅರಳಿಮರದ ಎಲೆ ಪವಿತ್ರವೆಂದು ತಿಳಿದು ಅಕ್ಷರ ಬರೆದಿರುವುದನ್ನು ಕಾಣುತ್ತೇವೆ. ಇದು ಬಳಕೆಗೊಂಡಿದ್ದು ಭಾರತ ಮತ್ತು ಚೀನಗಳಲ್ಲಿ. ಬಳಕೆ ಬಹುದಿನಗಳ ಕಾಲದವರೆಗೆ ಇರಲಾರದೆ ಅಳುವಿನಂಚಿನತ್ತ ಹೋಗಲಾರಂಭಿಸಿದವು. ಆದರೂ ಹಿಂದೂ ಮತ್ತು ಬೌದ್ದರು ಕೆಲವೊಂದು ಸಂನ್ಯಾಸಿಗಳ ಬೌದ್ಧಯತಿಗಳ ಚಿತ್ರಗಳನ್ನು ಬರೆಯಲು ಬಳಸುತ್ತಿದ್ದರು. ಈ ಚಿತ್ರಗಳು ಬಹು ವಿಸ್ಮಯವಾಗಿ ಕಾಣಿಸಿಕೊಳ್ಳುತ್ತಿದ್ದವು. ಚಿಕ್ಕದಾದರು ಚೊಕ್ಕದಾಗಿ ಕಾಣುವ ವರ್ಣಶಿಲ್ಪಗಳಂತೆ ಕಂಗೊಳಿಸುತ್ತಿವೆ. ಬೌದ್ಧಧರ್ಮದವರು ಇಂತಹ ವರ್ಣಮಯ ಅಲಂಕೃತ ಚಿತ್ರಗಳನ್ನು ೧೯ನೆಯ ಶತಮಾನದಲ್ಲಿ ಬರೆದಿದ್ದರು ಎಂಬುದು ತಿಳಿದುಬರುತ್ತದೆ. ಇದರ ಪ್ರತಿರೂಪವಾಗಿಯೇ ಕಾಗದದ ಹಾಳೆಯೊಂದರಲ್ಲಿ ಹೂ, ಚಿಟ್ಟೆ, ಕಪ್ಪೆ, ರಾಕೆಟ್, ಹಡಗು ಮತ್ತು ಪೋಟೋಕ್ಯಾಮರಗಳಂತಹ ಹುಡುಗರ ಆಟದ ಸಾಮಾನುಗಳನ್ನು ತಯಾರಿಸುವುದು ಈಗಲೂ ಕಂಡುಬರುತ್ತದೆ.

**ಕಬ್ಬಿಣ :**

ಈ ಎಲ್ಲ ಸಾಮಾಗ್ರಿಗಳಲ್ಲಿಯೇ ಘನರೂಪದ ವಸ್ತು ಇದಾಗಿದೆ. ಇದು ತೀವ್ರಗತಿಯಲ್ಲಿ ತುಕ್ಕು ಹಿಡಿಯುವಂತ ವಸ್ತು. ಸಾಮಾನ್ಯವಾಗಿ ಬರವಣಿಗೆಗೆ ಬಳಸಿಕೊಂಡಿರುವುದು ಅಪರೂಪ. ದೆಹಲಿಯಲ್ಲಿರುವ ಕಂಬದ ಮೇಲೆ ಇಮ್ಮಡಿ ಚಂದ್ರಗುಪ್ತನ ಶಾಸನವಿದೆ. 'ಧಾರ್ ಎಂಬಲ್ಲಿ ಕಬ್ಬಿಣದ ಕಂಬದ ಮೇಲೆ ಪಾರಸೀಲೇಖನವಿದೆ. ಅದರ ಸುತ್ತ ೧೫೫೧–೯೨ರ ಅಕ್ಬರನ ಕಾಲದ ಒಂದು ಬರಹ ಇದೆ'.[೨೫] ಈ ಎರಡು ಶಿಲೆಗಳು ಇಡೀ ಭಾರತದೇಶದಲ್ಲಿ ಇಂದಿಗೂ ಕೂಡ ತುಕ್ಕು ಹಿಡಿಯದೆ ಮೊದಲಿನ ರೂಪದಂತೆ ಕಂಗೊಳಿಸುತ್ತಲೇ ಇವೆ. ರಾಜರ ಹೆಸರನ್ನು ಚಿರಸ್ಥಾಯಿಯಾಗಿ ಇಂದಿಗೂ ಉಳಿಯುವಂತೆ ಮಾಡಿದ್ದಾರೆ.

**ಚಿನ್ನ ಬೆಳ್ಳಿ :**

ಬರಹ ಸಾಮಗ್ರಿಗಳಲ್ಲಿ ಸರಳ ಬೆಲೆಗೆ ನಿಲುಕಲಾರದ ವಸ್ತುಗಳಾಗಿವೆ. ಆದರೂ ಇವುಗಳ ಮೇಲೆಯೂ ಬರವಣಿಗೆ ಬರೆದಿರುವುದನ್ನು ಕಾಣುತ್ತೇವೆ. ಇಂದಿನ ದಿನಗಳಲ್ಲಿ ಆಭರಣಗಳ ಮೇಲೆ ವಿವಿಧ ಅಲಂಕೃತಗೊಂಡಿರುವ ವಿನ್ಯಾಸಗಳು ಕಂಡುಬರುತ್ತವೆ. ಸಿರ್‌ಸುಖ್ ಪ್ರದೇಶದ ಗುಂಗು ಎಂಬಲ್ಲಿ ಬೌದ್ಧಸ್ತೂಪದಲ್ಲಿರುವ ಚಿನ್ನದ ತಗಡಿನಲ್ಲಿ ಬರೆದ ಲಿಪಿ, ಆಂಧ್ರದಲ್ಲಿ ಕಂಡುಬಂದ ಕೃಷ್ಣ ಜಿಲ್ಲೆಯ ಭಟ್ಟಿಪೋಲುವಿನಲ್ಲಿ ಬೆಳ್ಳಿಯ ತಗಡಿನ ಲಿಪಿ, ರಾವಲ್ಪಿಂಡಿ ಜಿಲ್ಲೆಯ ಮಾಣಿಕಿಯಾಲದಲ್ಲಿ ಬೆಳ್ಳಿನಾಣ್ಯ ಇವೆಲ್ಲವುಗಳು ಬೌದ್ಧರ ಕಾಲದಲ್ಲಿ ಹೇರಳವಾಗಿ ಕಂಡುಬಂದಿವೆ. ಇವರು ಬರವಣಿಗೆಯ ಮೇಲೆ ಆಸಕ್ತಿ ಇರುವುದರಿಂದಲೇ ಏನೆಲ್ಲವುಗಳಲ್ಲಿಯೂ ಲಿಪಿಗೈದಿದ್ದಾರೆ. ಇವರ ಲಿಪಿಗಳು ಸ್ತೂಪಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. 'ಕ್ರಿ.ಶ.೧೫೮೯ರಲ್ಲಿ ರಚಿತವಾದ ಜಯನೃಪಕಾವ್ಯದಲ್ಲಿ ತೊಳಪಬೆಳ್ಳಿಯ ಪಲಗೆಗೆ ಕತ್ತರಿಯ ಮಿಸುಪ ರಜಮಂ ಪರಿಕಲಿಸುತ್ತ'.[೨೬] ಎಂದು ಕಾವ್ಯಗಳಲ್ಲಿ ಬರೆದುಕೊಂಡಿದ್ದಾರೆ. ಬೆಳ್ಳಿಯ ಹಲಗೆಗಳು ಮೇಲೆ ಬಳಕೆ ಅಂದು ಸರ್ವೆಸಾಮಾನ್ಯವಾಗಿತ್ತು.

**ಹಿತ್ತಾಳೆ :**

ಈ ಲೋಹವನ್ನು ಬಳಸಿದವರಲ್ಲಿ ಪ್ರಮುಖರಂದರೆ ಬೌದ್ಧರು. ಈ ಲೋಹ ಸಾಮಾನ್ಯವಾಗಿ ಎಲ್ಲ ವಸ್ತುಗಳಲ್ಲಿಯೂ ಬಳಕೆಯಲ್ಲಿದೆ. ಇವರ ಕಾಲದಲ್ಲಿ ಬರವಣಿಗೆಗೆ ಬಳಸಿಕೊಳ್ಳಲಾರದ ವಸ್ತು ಒಂದು ಕೂಡ ಇದ್ದಿಲ್ಲ. 'ಆಡುಮುಟ್ಟದ ಸೊಪ್ಪಿಲ್ಲ' ಎನ್ನುವಂತೆ ಎಲ್ಲ ವಸ್ತುಗಳ ಮೇಲೂ ಲಿಪಿಗೈದಿರುವುದನ್ನು ಇವರ ಕಾಲದಲ್ಲಿ ನೋಡಬಹುದು. ಇವರ ಕಾಲದಲ್ಲಿ ಲಿಪಿಕಾರರಿಗೆ ಮಹತ್ವದ ಸ್ಥಾನವಿತ್ತು. ಲಿಪಿಕಾರರಿಗೆ ಆಸಕ್ತಿಯನ್ನು ಹೆಚ್ಚಿಸುವಲ್ಲಿ ಪ್ರೇರಣೆ ನೀಡಿತು. ೬ನೆಯ ಶತಮಾನದ ಒಂದು ಬುದ್ಧನ ಅವಶೇಷವನ್ನಿಟ್ಟುಕೊಂಡ ಪಾತ್ರೆ ಅಫ್ಘಾನಿಸ್ಥಾನದ ಮರ್ದಕ ಎಂಬಲ್ಲಿ ಸ್ತೂಪವೊಂದರಲ್ಲಿ ಕಾಣಿಸಿಕೊಂಡಿದೆ. ಮತ್ತು ಅಲಹಾಬಾದನಲ್ಲಿ ಬರುವ ಕೋಸಂಪೊಂದರಲ್ಲಿ ಗುಪ್ತರ ಕಾಲದಲ್ಲಿಯ ಮುದ್ರೆ ಉಂಗುರ ಕಂಡುಬಂದಿದೆ. ಅದರಲ್ಲಿ ವಿಗ್ರಹದ ಮೇಲೆ ಬರವಣಿಗೆಯಿದೆ.

ನಮ್ಮ ಕರ್ನಾಟಕದಲ್ಲಿಯೂ ಸ್ಥೂಪಶಾಸನಗಳು, ಹಿತ್ತಾಳೆಯ ಪ್ರತಿಮೆಗಳು, ಪೀಠಗಳು, ಕನ್ನಡ ಲಿಪಿಶಾಸನಗಳು, ಸ್ತಂಬಗಳು ವಿಶೇಷವಾಗಿ ಕಂಡುಬಂದಿವೆ. ಇವೆಲ್ಲವುಗಳನ್ನು ಬೌದ್ಧರ ಕಾಲದವುಗಳೆಂದು ಕಂಡುಕೊಳ್ಳಬಹುದಾಗಿದೆ. ಈ ಹಿತ್ತಾಳೆಯಲ್ಲಿರುವ ಲಿಪಿಗಳು ಸಣ್ಣ ಪಟಗಳಲ್ಲಿ ಹೆಚ್ಚಾಗಿ ಕಂಡುಬಂದಿವೆ. ಇನ್ನುಳಿದ ಕೃತಿಗಳಿಗಾಗಿ ದೊಡ್ಡಕಂಬಗಳಲ್ಲಿ ಪ್ರತ್ಯೇಕವಾಗಿ ಹಿತ್ತಾಳೆಯನ್ನು ಲೇಪಿಸಿ ಅದರಲ್ಲಿ ಲಿಪಿಗೈದಿದ್ದಾರೆ ಮತ್ತು ಶಾಸನಗಳನ್ನು ಕೂಡ ಬರೆಸಿರುವುದನ್ನು ನೋಡಬಹುದು.

**ಕಂಚು :**

ಈ ಲೋಹ ಪ್ರಾಚೀನ ಕಾಲದಲ್ಲಿ ಭಾರತದಲ್ಲಿ ಹೇರಳವಾಗಿ ದೊರೆಯುವ ಖನಿಜ ಸಂಪತ್ತು ಇದಾಗಿದೆ. ಇದು ಲಿಪಿಗೈಯಲು ಬಹುಸುಲಭವಾದುದು. ಅಷ್ಟೇ ಮೃದುವಾಗಿ ಬಂಗಾರದಂತೆ ಕಾಣುವ ಬಣ್ಣ ಹೊಂದಿದೆ. ಈ ಕಂಚಿನಲ್ಲಿ ಬ್ರಾಹ್ಮಿ, ಖರೋಷ್ಠಿ ಮತ್ತು ಗ್ರೀಕ್‌ಲಿಪಿಗಳು ಕಂಡುಬಂದಿವೆ. ಪೇಷಾವರಿನಲ್ಲಿ ದೊರೆತಿರುವ ಒಂದು ಕಂಚಿನ ತಲೆಯ ಸುತ್ತ ಲಿಪಿ ಗೈದ ಅಕ್ಷರಗಳು ದೊರೆತಿವೆ. ಈ ಅಕ್ಷರಗಳನ್ನು ಇದುವರೆಗೂ ಓದಲು ಅಸಾಧ್ಯವಾಗಿಲ್ಲ. ಇದೊಂದು ವಿಸ್ಮಯಕರ ಸಂಗತಿಯಾಗಿದೆ ಮತ್ತು ಕೆಲವೊಂದು ತಾಮ್ರಪಟ್ಟಿಗಳಿಂದ ಜೋಡಿಸಿರುವ ಉಂಗುರದ ಮೇಲೆ ಜೋಡಿಸಿ ಬರೆದಿರುವ ಕಂಚಿನ ಹಲವಾರು ರಾಜ ಲಾಂಚನಗಳ ಮುದ್ರೆಗಳ ಮೇಲೆ ಲಿಪಿ ಇರುವುದನ್ನು ನಮ್ಮ ವಿದ್ವಾಂಸರು ತಿಳಿಸಿದ್ದಾರೆ. ಈ ಕಂಚಿನಿಂದ ಅಕ್ಷರಗಳು ಬಿಡಿ ಬಿಡಿಯಾಗಿ ಕಾಣುತ್ತವೆ. ಇದರಿಂದ ಗ್ರಂಥಗಳು ಮುದ್ರಿತಗೊಂಡಿಲ್ಲ. ವಸ್ತುಗಳ ಮೇಲೆ ಲಿಪಿಗೈದಿದ್ದಾರೆ. ಪಟ್ಟಿಕೆಗಳು, ಶಾಸನಗಳು ಕಂಡುಬಂದಿವೆ. ಸಿಂಧೂ ನಾಗರಿಕತೆಯಲ್ಲಿ ಎಲ್ಲ ವಸ್ತುಗಳನ್ನು ಕಂಚಿನಿಂದಲೇ ತಯಾರಿಸಿ ಬಳಸಿಕೊಳ್ಳತ್ತಿದ್ದರು. ಬಳಕೆಯ ವಸ್ತುಗಳಾಗಿಯೂ ಕಂಡುಬಂದಿವೆ. ಇಂದುಕೂಡ ಪ್ರಮುಖವಾಗಿ ದೇವಾಲಯಗಳಲ್ಲಿ ಕಳಸ, ಪೂಜೆಗಾಗಿ ತಟ್ಟೆ, ಗಂಟೆ ಮತ್ತು ಎತ್ತುಗಳ ಕೊರಳಿಗೆ ಗೆಜ್ಜೆಗಳಾಗಿಯೂ, ಶಾಲೆಗಳಲ್ಲಿ ಘಂಟೆಯಾಗಿ, ಉಪಯೋಗಿಸಿಕೊಳ್ಳತ್ತಲೇ ಇದ್ದೇವೆ. ಇದು ಶಬ್ದವನ್ನು ಹೆಚ್ಚಾಗಿ ಕೇಳಿಸುವ ಘನರೂಪವನ್ನು ಪಡೆದುಕೊಂಡಿದೆ ಆದ್ದರಿಂದಲೇ ಘಂಟೆಗೆ ಹೆಚ್ಚಾಗಿ ಬಳಸುತ್ತಾ ಬಂದಿದ್ದೇವೆ.

**ತಾಮ್ರ :**

ಪ್ರಾಚೀನ ಕಾಲದಲ್ಲಿ ಬರಹ ಸಾಮಾಗ್ರಿಯಾಗಿ ಬಳಸಿಕೊಂಡಿದ್ದನ್ನು ನೋಡುತ್ತೇವೆ. ಕನ್ನಡ ನಾಡಿನಲ್ಲಿ ದೊರೆತಿರುವ ಗಂಗರ ಮತ್ತು ಕದಂಬರ ಕಾಲದ ಅನೇಕ ತಾಮ್ರಪಟ ಶಾಸನಗಳು ಕಂಡುಬಂದಿವೆ. ರಾಷ್ಟ್ರಕೂಟರ ಮೂರನೆಯ ಗೋವಿಂದರ ಕಾಲದಲ್ಲಿ ಕನ್ನಡ ಲಿಪಿಯೊಂದಿಗೆ ಬಳಸಿಕೊಂಡು ಬರೆದ ತಾಮ್ರಶಾಸನ, ಬಾದಾಮಿ ಚಾಳುಕ್ಯರ ಇಮ್ಮಡಿ ಕೀರ್ತಿವರ್ಮನ ತಾಮ್ರಶಾಸನ, 'ಅಣ್ಣಮಾಚಾರ್ಯರು ಸಂಗೀತ ಕೃತಿಗಳು ತಾಮ್ರಪಟಗಳ ಮೇಲೆ ಲಿಖಿತವಾಗಿದ್ದು, ತಿರುಪತಿಯ ಶ್ರೀನಿವಾಸ ದೇವಾಲಯದಲ್ಲಿವೆ'.[೨೭] ಪೈಠಾಣದಲ್ಲಿ ತಾಮ್ರಪಟಗಳ ಶಾಸನಗಳು, ಕಂಡುಬಂದಿವೆ. ಅಲ್ಲದೆ ತಾಮ್ರದ ನಾಣ್ಯಗಳು, ಪೂರ್ವಕಾಲದಲ್ಲಿ ದಿನಬಳಕೆಯ ವಸ್ತುಗಳಾಗಿ ಬಳಕೆಯಲ್ಲಿದ್ದವು. ಇವೆಲ್ಲವುಗಳನ್ನು ಫಾಹಿಯಾನ್ ಭಾರತಕ್ಕೆ ಬಂದು ಸಂಚಾರಿಯಾಗಿ ಅಲೆಯುತ್ತಿರುವಾಗ ಕಂಡು

ಆಶ್ಚರ್ಯ ಭರಿತನಾದನು. ಭಾರತ ಲೋಹವಸ್ತುಗಳಿಂದಲೂ, ಶ್ರೀಮಂತವಾದುದು ಎಂದು ಒಂದು ಕಡೆ ತನ್ನ ಕೃತಿಯಲ್ಲಿ ಪ್ರತಿಸಿಕೊಂಡಿದ್ದಾನೆ.

**ಅಲೊಯಿ :**

ಪ್ರಾಚೀನ ಕಾಲದಲ್ಲಿ ಬರಹ ಸಾಮಗ್ರಿಯಾಗಿ ಕಂಡುಬಂದಿರುವ ಇದೊಂದು ಸಸ್ಯ ವೃಕ್ಷವಾಗಿದೆ. ಇದು ಭೂರ್ಜ ಪತ್ರದಂತೆ ಕಂಡುಬರುತ್ತದೆ. ಇದಕ್ಕೆ ಅಲೊಯಿ ಮರವೆಂದೂ ಕರೆಯುತ್ತಾರೆ. ಮರದ ಒಳಪದರದಿಂದ ಉಪಯೋಗಿಸಿದ್ದು ಕಂಡುಬಂದಿದೆ. ಅಸ್ಸಾಮಿನ ಬ್ರಹ್ಮಪುತ್ರ ಕಣಿವೆಯಲ್ಲಿ ಹೇರಳವಾಗಿ ಉಪಯೋಗಿಸಿಕೊಳ್ಳುತ್ತಾರೆ. ೭ನೆಯ ಶತಮಾನದ ಬಾಣನು ಪ್ರಸ್ತಾಪಿಸಿದಂತೆ ಅಸ್ಸಾಮಿಯಲ್ಲಿ ಕಂಡುಬಂದಿರುವ 'ರಾಜಾ ಬಾಸ್ಕರ ವರ್ಮನು ಕನೂಜಿನ ರಾಜ ಹರ್ಷನಿಗೆ ಆಭರಣಗಳು ರೇಷ್ಮೆಬಟ್ಟೆಗಳು ಮತ್ತು ಅಲೊಯಿ ಮರದ ಒಳಪದರದಿಂದ ತಯಾರಿಸಿದ ಹಸ್ತಪ್ರತಿಗಳ ಕಟ್ಟುಗಳನ್ನು ಕಾಣಿಕೆಯಾಗಿ ಕಳುಹಿಸಿದನು'.[೨೮] ಇಂತಹ ಹಸ್ತಪ್ರತಿಗಳು ಹಿಮಾಲಯ ಪ್ರದೇಶದಲ್ಲಿ ಕಂಡುಬರುತ್ತವೆ. ಆದರೂ ಅಲ್ಪ ಪ್ರಮಾಣದಲ್ಲಿ ಬಳಸಿಕೊಂಡಿರಬೇಕೆಂದು ಅನ್ನಿಸುತ್ತದೆ. ಇವರು ತಮ್ಮ ವ್ಯವಹಾರಗಳಿಗೆ, ಕಛೇರಿ ಪತ್ರಗಳಿಗೆ, ಬಳಸಿಕೊಂಡಿದ್ದರು.

**ಸ್ಫಟಿಕ :**

ಇದು ಒಂದು ಸಸ್ಯ. ಭೂರ್ಜಪತ್ರದಂತೆ ಹಿಮಾಲಯ ಪ್ರದೇಶಗಳಲ್ಲಿರುವ ಇದೊಂದು ಜಾತಿಯಗಿಡವಾಗಿದೆ. ಬರೆಯಲು ಬಹು ಉಪಯುಕ್ತವಾಗಿತ್ತು. ತಾಳಪತ್ರಗಳಂತೆ ಜೋಡಿಸಿ ಕಟ್ಟನ್ನು ಕಟ್ಟಿ ರಂದ್ರಗಳ ಮೂಲಕ ದಾರ ಪೋಣಿಸಿ ಕಟ್ಟಿರುತ್ತಾರೆ. ಅಕ್ಷರಗಳು ನೋಡಲು ಬಹು ಸ್ಪಷ್ಟವಾಗಿ ಬಿಳಿಹಾಳೆಯಂತೆ ಕಂಡುಬರುತ್ತವೆ. ಇವುಗಳ ಪೋಷಣೆಗೆ ಮರದ ತೊಗಟೆಗಳೇ ರಕ್ಷಣಾ ಕವಚಗಳಾಗಿರುತ್ತವೆ. ಇದರ ಬರವಣಿಗೆ ಕಂಡುಬಂದಿರುವುದು ಆಂದ್ರದ ಕೃಷ್ಣಜಿಲ್ಲೆಯ ಭಟ್ಟಪ್ರೋಲು ಎಂಬಲ್ಲಿ ದೊರೆತಿರುವುದೆಂದು ಕಂಡುಬಂದಿದೆ. ಇಂತಹ ಹಸ್ತಪ್ರತಿಗಳು ಹೆಚ್ಚು ಕಾಲ ಜೀವಂತವಾಗಿರುತ್ತಿರಲಿಲ್ಲ. ಆದರೂ ಅನಿವಾರ್ಯವಾಗಿ ತಾಳೆಗಿಡಗಳು ಇಲ್ಲದ ಕಾರಣ ಬಳಸುತ್ತಿದ್ದರು. ಎಂದು ಹೇಳಬಹುದು.

**ಕಾಗದ :**

ಬರವಣಿಗೆಯ ಸಾಮಗ್ರಿಯಾಗಿ ಮೇಲುಗೈಯನ್ನು ಇಂದು ಕಾಗದ ಸಾಧಿಸಿಕೊಂಡಿದೆ. ಪೂರ್ವಕಾಲದಲ್ಲಿ ೧೪ನೆಯ ಶತಮಾನದಲ್ಲಿ ಕಾಗದ ಬಳಕೆಗೆ ಬಂದಿತ್ತಾದರೂ ೧೯ನೆಯ ಶತಮಾನದವರೆಗೆ ಎಲ್ಲಿಯೂ ಬಳಸಿಕೊಂಡಿಲ್ಲ. ಕಾರಣ ಎಂದರೆ ಈ ಕಾಗದದಲ್ಲಿ ಬರೆಯುವ ಅಕ್ಷರಗಳು ಸುದೀರ್ಘವಾಗಿ ಇರುವುದಿಲ್ಲ. ವಿಷಯಗಳು ಬಹುಕಾಲದವರೆಗೆ ಉಳಿಯುವುದಿಲ್ಲ ನಶಿಸಿಹೋಗುವಂತಹವು ಎಂಬುದನ್ನು ಕಂಡುಕೊಂಡಿದ್ದರು.

ಪತ್ತಳಿಗೆಯೆನಲು ಕಾಗದಮಕುಂ ಎಂದು ಅಭಿನವ ಮಂಗರಾಜನು ಅಂದೇ ಕಾಗದವನ್ನು ಕುರಿತು ತನ್ನ ಅಭಿನವಾಬಿಧಾನಂ ಎಂಬ ಕೋಶದಲ್ಲಿ ಹೀಗೆ ಬರೆದಿದ್ದಾನೆ. ಇದು ಲೇಖನಗಳಿಗೆ

ತಕ್ಕಂತೆ ಈ ಕಾಗದ ಸರಿಯಾದುದಲ್ಲ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಕೃತಿ ಬರೆಯುವುದೆಂದರೆ ಅಂದು ವಿಧಿ–ವಿಧಾನಗಳ ಮೊತ್ತವಾಗಿತ್ತು. ಪ್ರಾರಂಭಕ್ಕೆ ಅಂತ್ಯಕ್ಕೆ ಪೂಜೆ ಕಾರ್ಯಕ್ರಮಗಗಳು ನಡೆಯುತ್ತಿದ್ದವು. ಅಂದಿನ ಬರವಣಿಗೆ ಸಾವಿರ ವರ್ಷಗಳದ್ದಾಗಿದ್ದರೆ ಇಂದಿನ ಬರವಣಿಗೆ ಕ್ಷಣಾರ್ಧದಲ್ಲಿ ನಶಿಸಿ ಹೋಗುವಂತಹ ಮಟ್ಟಕ್ಕೆ ಕಾಗದ ಬಳಕೆ ತಂದಿದ್ದೇವೆ. ಈ ಕಾಗದ ಬಳಕೆಗೆ ಬಂದಿದ್ದು ಅಧಿಕೃತವಾಗಿ ತಿಳಿದುಬಂದಿಲ್ಲ. ನಮಗೆ ದೊರೆತ ಅದರ ಪ್ರಥಮ ಉಲ್ಲೇಖವು 'ಕ್ರಿ.ಶ.೧೩೧೦ರ ಮೈಸೂರಿನ ಶಾಸನದಲ್ಲಿ 'ಕಾಗಜ' ಎಂಬುದಾಗಿ ಬಂದಿದೆ'.[೨೯] ಈ ಕಾಗದ ಕರ್ನಾಟಕದಲ್ಲಿ ಮಹಮ್ಮದೀಯರ ಕಾಲದಲ್ಲಿ ಬಳಕೆಗೆ ಬಂದಿತು.

ಕಾಗದದಲ್ಲಿ ಸ್ವದೇಶಿ ಕಾಗದ ಮತ್ತು ವಿದೇಶಿ ಕಾಗದ ಎನ್ನುವ ರೂಪಗಳಿವೆ. ಸ್ವದೇಶಿ ಕಾಗದವನ್ನು ಗೃಹ ಕೈಗಾರಿಕೆಗಳಂತೆ ಹತ್ತಿಬಟ್ಟೆ, ಕಚ್ಚಾಪದಾರ್ಥಗಳನ್ನು ನೀರಿನಲ್ಲಿ ನೆನೆಹಾಕಿ ತಯಾರಿಸುತ್ತಿದ್ದರು. ಇಂತಹ ಕಾಗದಗಳನ್ನು 'ಕೋರಿ ಕಾಗದಗಳೆಂದು' ಕರೆಯುತ್ತಾರೆ. ಇವು ದಪ್ಪನೆಯ ಕಂದು ಬಣ್ಣದಿಂದ ಕೂಡಿರುತ್ತಿದ್ದವು. ಇದು ೬ ಅಂಗುಲ ಅಗಲ ೧೨ ಅಂಗುಲ ಉದ್ದವಾಗಿ ಸಣ್ಣ ಇಲ್ಲವೆ ದೊಡ್ಡ ಆಕಾರಗಳೊಂದಿಗೆ ಕಂಡುಬರುತ್ತಿತ್ತು. ಈ ಕಾಗದಗಳನ್ನು ಜೋಡಿಸಿ ಅವುಗಳ ಮಧ್ಯ ರಂಧ್ರವನ್ನು ಮಾಡಿ ದಾರದಿಂದ ಕಟ್ಟುತ್ತಿದ್ದರು. ನಂತರ ಇವುಗಳನ್ನು ಬರವಣಿಗೆಗೆ ಉಪಯೋಗಿಸಿಕೊಳ್ಳುತ್ತಿದ್ದರು. ವಿದೇಶಿ ಕಾಗದ ಕೋರಿಕಾಗದ ಕ್ಕಿಂತ ತೆಳ್ಳಗೆ ನುಣುಪಾಗಿದ್ದು ಬರೆಯಲು ಅನುಕೂಲಕರವಾಗಿತ್ತು, ನಮ್ಮ ಪ್ರಾಚೀನರು ಬರವಣಿಗೆಗಾಗಿ ನೀಲಿಬಣ್ಣದ ವಿದೇಶಿ ಕಾಗದಗಳನ್ನು ಬಳಸುತ್ತಿದ್ದರು. ಇವುಗಳಿಗೆ ನೀಲಿಹೊತ್ತಿಗೆ ಎಂದು ಕರೆಯುತ್ತಿದ್ದರು. ಇವುಗಳನ್ನು ವೈರಾಗ್ಯದ ವಿಷಯಗಳಿಗಾಗಿ, ಕೆಲವೊಂದು ಗುಪ್ತವಿಚಾರಗಳಿಗಾಗಿ, ಬಳಸಿಕೊಳ್ಳುತ್ತಿರುವುದನ್ನು ಕಾಣುತ್ತೇವೆ, ಆದ್ದರಿಂದ ನೀಲಿ ಹೊತ್ತಿಗೆಗಳನ್ನು ಯುವಕರು ಓದಬಾರದೆಂದು ಹಿರಿಯರು ಇಂದಿಗೂ ಹೇಳುತ್ತಾರೆ.

ಈ ಕಾಗದವನ್ನು ಬರೆಯುವ ಮೊದಲು ಸರಿಯಾಗಿ ಜೋಡಿಸಿ ದಾರದೊಂದಿಗೆ ಪೋಣಿಸುತ್ತಿದ್ದರು. ಗೆರೆಗಳನ್ನು ಎಳೆಯುತ್ತಿದ್ದರು. ನಂತರ ಪಟಕದ ನೀರಿನಲ್ಲಿ ಎದ್ದಿ ಒಣಗಿಸಿ ಬರವಣಿಗೆಗೆ ಒಂದೊಂದನ್ನು ತೆಗೆದುಕೊಂಡು ಬರೆಯುತ್ತಿದ್ದರು. ನಂತರ ಕುಂಚಗಳಿಂದ ಬಣ್ಣ ಲೇಪಿಸುತ್ತಿದ್ದು, ಒಣಗಿಸಲು ಬಿಡುತ್ತಿದ್ದರು. ನಂತರ ರಂಧ್ರಗಳಿಂದ ದಾರ ಪೋಣಿಸಿ ಕಟ್ಟುಗಳನ್ನಾಗಿ ಕಟ್ಟುತ್ತಿದ್ದರು. ಇದರಿಂದ ಹುಳುಗಳಿಂದ ಪಟಿಕದ ನೀರು ರಕ್ಷಿಸುತ್ತಿತ್ತು. ಈ ಕಾಗದ ಮೇಲೆ ಕಂಡುಬಂದಿರುವ ಮೊದಲು ಕೃತಿ ಸಂಸ್ಕೃತದಲ್ಲಿ ಬರೆದ 'ವಜ್ರಚ್ಛೇದಿಕಾ ಪ್ರಜ್ಞಾವಾರಮಿತಾ ಸೂತ್ರ'[೩೦] ಇದು ಬೌದ್ದ ಕೃತಿಯ ಚೀನಿ ಅನುವಾದಗೊಂಡ ಗ್ರಂಥವೆಂದು ಹೇಳಬಹುದು. ನಂತರ ಕನ್ನಡ ಕೃತಿ. ಹೀಗೆ ಎಲ್ಲ ಭಾಷೆಗಳಲ್ಲಿ ಬರೆದ ಗ್ರಂಥಗಳು ಪ್ರಕಟಗೊಂಡವು. ಪ್ರತಿಗಳಿಗೆ ಬಣ್ಣಹಾಕುವುದು ಅಂದಿನ ಕೆಲವೊಂದು ರಾಸಾಯನಿಕ ವಸ್ತುಗಳು ಇಂದು ಗಿಡಗಳ ಮೂಲಕ ತೆಗೆದುಕೊಂಡು ಇವುಗಳಿಗೆ ಕೆಲವೊಂದು ಕ್ರಿಮಿಕಲ್‌ಗಳಂತಹ ಬಣ್ಣವನ್ನು ವಿವಿಧ ರೂಪಗಳಲ್ಲಿ ಬಳಸುವುದರಿಂದ ಅನೇಕ ಬಣ್ಣಗಳಿಂದ ಕೂಡಿದ ಪತ್ರಿಕೆ, ಪೆನ್ನುಗಳನ್ನು ಇಂದಿಗೂ ವಿವಿಧ ರೂಪಗಳಲ್ಲಿ ತಯಾರಿಸುತ್ತಲೇ ಇದ್ದಾರೆ.

**ರೇಷ್ಮೆಕಾಗದ :**

ಬರವಣಿಯ ಸಾಮಾಗ್ರಿಗಳಲ್ಲಿ ಇದು ಒಂದಾಗಿದೆ. ಈ ರೇಷ್ಮೆಯಿಂದ ಮೊದಲು ಉಡುಪುಗಳನ್ನು ತಯಾರಿಸಲು ಬಳಸುತ್ತಿದ್ದರು. ಕಾಲಾಂತರದಲ್ಲಿ ಬರವಣಿಗೆಗಾಗಿ ಬಳಸಿಕೊಂಡಿದ್ದು ಕಂಡುಬರುತ್ತದೆ. ಕ್ರಿಪೂ. ೪ ಮತ್ತು ೫ನೆಯ ಶತಮಾನದಲ್ಲಿ ಬಳಕೆಯಲ್ಲಿ ಕಂಡುಬಂದಿತು. ವಿಶೇಷವಾದ ಮಾಹಿತಿಗಳಿಗಾಗಿ ಬಳಸುತ್ತಿದ್ದರು. ಕಾಗದ ಪತ್ರಗಳಿಗಾಗಿ, ಸಾಹಿತ್ಯ ಕೃತಿಗಳಿಗಾಗಿ, ಸರಕಾರಿ ದಾಖಲೆಗಳನ್ನು ಬರೆಯಲು ಈ ರೇಷ್ಮೆ ಕಾಗದವನ್ನು ಬಹುವ್ಯಾಪಕವಾಗಿ ಬಳಸುತ್ತಾ ಬಂದರು. ಈ ರೇಷ್ಮೆಯನ್ನು ಚೀನೀಯರು ಮೊದಲಿಗೆ ಕಂಡುಹಿಡಿದರು. ದಿನಕಳೆದಂತೆಲ್ಲ ರೇಷ್ಮೆಗೆ ಚೀನಾದಲ್ಲಿ ಬೇಡಿಕೆ ಹೆಚ್ಚಾಗುತ್ತ ಬಂದಿತು. ಹಳೆಯ ರೇಷ್ಮೆ ಚಿಂದಿಗಳನ್ನು ಬರೆಯುವಲ್ಲಿ ಆಸಕ್ತಿ ಹುಟ್ಟಕೊಂಡಿತು. ನಂತರ ರೇಷ್ಮೆಯಿಂದ ಹತ್ತಿಯ ಬಳಕೆಯನ್ನು ಬಳಿಸಿಕೊಂಡು ಹತ್ತಿಯನ್ನು ತಯಾರಿಸಲು ಪ್ರವೀಣರಾದರು. ಇದು ಕಾಗದದಂತೆ ಕಾಣುತ್ತಿತ್ತು. ಇದಕ್ಕೆ ರಾಗಿ, ಗೋದಿ, ಮತ್ತು ಅಕ್ಕಿಯಿಂದ ಬಂದಂತಹ ಗಂಜಿಯಿಂದ ಹತ್ತಿಗೆ ಲೇಪಿಸುತ್ತಿದ್ದರು. ಇದರಿಂದ ಹತ್ತಿಬಿಳಿಯ ಹಾಳೆಯಂತೆ ಹೊರಬಲು ಪ್ರಾರಂಭವಾಗಿತು. ಇಂತಹ ಕಾಗದವನ್ನು ಬಳಸಿಕೊಂಡು ಅನೇಕ ಹಸ್ತಪ್ರತಿಗಳನ್ನು ಬರೆಯುತ್ತಿದ್ದರು. ಇವುಗಳಲ್ಲಿ ಕೆಲವೊಂದು ಹೊತ್ತಿಗೆಯ ಪ್ರತಿಗಳು, ಭವಿಷ್ಯ ಪ್ರತಿಗಳು, ಸಾಹಿತ್ಯದ ಪ್ರತಿಗಳು, ಹತ್ತಿಯಪ್ರತಿಗಳೂ ಕೂಡ ಬರೆಸಿರುವುದನ್ನು ಕಾಣುತ್ತೇವೆ. ರಾಜಸ್ಥಾನದಲ್ಲಿ ಇಂದಿಗೂ ಕೆಲವೊಬ್ಬರು ಸಂಚಾರಿಗಳಾಗಿ ಇದರ ಹೊತ್ತಿಗೆಯ ಪತ್ರಗಳನ್ನು ಹತ್ತಿಯ ಪ್ರತಿಗಳನ್ನು ಬಳಸಿಕೊಂಡು ಜನರಿಗೆ ಭವಿಷ್ಯವಾಣಿಯನ್ನು ಹೇಳುತ್ತಾರೆ. ಹತ್ತಿಯನ್ನು ಬೆಳೆಯಲು ವಿವಿಧ ವಿಧಾನಗಳನ್ನು ಕೂಡ ಕೆಲವೊಬ್ಬರಿಗೆ ತಿಳಿಸಿ ಹೇಳುತ್ತಲೇ ಇದ್ದಾರೆ.

ಈ ಕಾಗದಗಳಲ್ಲಿ ಕೋರೆಕಾಗದ, ನೆಲ್ಲುಕಾಗದ, ಪೆಪಿರೆಸ್ ಕಾಗದಗಳೆಂದು ವಿವಿಧ ಬಗೆಗಳಿವೆ. ಹೀಗೆ ಹಲವಾರು ರೂಪಗಳಾಗಿ ಕಾಗದ ಹುಟ್ಟಿಕೊಂಡು ಇಡೀ ಪರಿಸರವನ್ನೇ ಕಾಗದಮಯವಾಗಿರುವಂತೆ ಮಾಡಿತು. ಇಂದು ಪ್ಲಾಸ್ಟಿಕ್ ಪರಿಸರ ವ್ಯವಸ್ಥೆ ಜಾರಿಗೆ ಬಂದಿದೆ.

ಈ ಎಲ್ಲ ಸಾಮಗ್ರಿಗಳಲ್ಲಿ ಪ್ರಾಚೀನಕಾಲದಲ್ಲಿ ಬರವಣಿಗೆಯಾಗಿ ಬಳಸಿಕೊಂಡಿದ್ದು ಕಂಡುಬಂದಿದೆ. ಬರವಣಿಗೆ ಎಂಬುದು ದೈವೀ ಮನೋಭಾವನೆಯನ್ನು ಹೊಂದಿತ್ತು. ಲಿಪಿಕಾರರು ಇಡೀ ಪುಸ್ತಕವನ್ನು ಒಬ್ಬರೇ ಬರೆಯುತ್ತಿರಲಿಲ್ಲ. ಹಲವಾರು ವಿದ್ವಾಂಸರೊಂದಿಗೆ ವಿಷಯ ಚರ್ಚಿಸಿ ಸ್ಪಷ್ಟಪಡಿಸುತ್ತಿದ್ದರು. ಒಂದೊಂದು ಅಧ್ಯಾಯದ ನಂತರ ವಾದ ವಿವಾದಗಳು, ಚರ್ಚೆಗಳಲ್ಲಿ ಸರಿಪಡಿಸಿಕೊಂಡ ಮೇಲೆ ಮುಂದಿನ ಅಧ್ಯಾಯವನ್ನು ಬರೆಯುತ್ತಿದ್ದರು. ಚರ್ಮ, ದಂತ ಭೂರ್ಜಪತ್ರಗಳಂತಹ ಸಾಮಾಗ್ರಿಗಳಲ್ಲಿ ಬರೆದ ಬರಣಿಗೆ ಬಹುದಿನಗಳ ಕಾಲ ಉಳಿಯಲಿಲ್ಲ. ನಂತರ ಬೇರೊಂದು ಮಾರ್ಗವನ್ನು ಕಂಡುಕೊಂಡು ತಾಳೆಗರಿಯಂತಹವುಗಳಲ್ಲಿ ಬರೆದರೆ ಸುಮಾರು ವರ್ಷಗಳವರೆಗೂ ಇರಬಹುದೆಂಬ ನಂಬಿಕೆಯಿಂದ ಬರೆಯಲು ಪ್ರಾರಂಭಿಸಿದರು. ಬರುಬರುತ್ತಾ ಇವರು ನಿರೀಕ್ಷಿಸಿದ ಕಾಲದಷ್ಟು ಇರಬಹುದೇನೋ ಎಂಬಂತೆ ತಾಳೆಗರಿಗಳಲ್ಲಿ ಹೆಚ್ಚಾಗಿ ಬರೆಯತೊಡಗಿದರು. ಅಂದು ಬರೆದ ಬರವಣಿಗೆಗಳು ಇಂದಿಗೂ ಕಣ್ಣಿಗೆ ಕಟ್ಟುವಂತೆ ಕಾಣುತ್ತವೆ. ಸಾಹಿತ್ಯ ಸಂಸ್ಕೃತಿಯ ವಾಹಕಗಳಾಗಿವೆ.

## ೪.೩. ಹಸ್ತಪ್ರತಿಗಳ ಲೌಕಿಕ ನೆಲೆಗಳು :

ಕನ್ನಡ ಹಸ್ತಪ್ರತಿಗಳಲ್ಲಿ ಸಾಮಾಜಿಕ ನೆಲೆಗಳೇ ಹೆಚ್ಚಾಗಿರುವುದನ್ನು ಕಾಣುತ್ತೇವೆ. ನಮ್ಮ ಪರಂಪರೆಯಿಂದ ನಡೆದುಕೊಂಡು ಬಂದಿರುವ ಲೋಕ ರೂಢಿಗಳಿಗೆ ಲೌಕಿಕ ನೆಲೆಗಳೆಂದು ಕರೆಯುತ್ತಾರೆ. ಹಸ್ತಪ್ರತಿಗಳು ಮಾನವನ ಮೋಕ್ಷಾ ಪಥಗಳೆಂದೂ ಕರೆದುಕೊಳ್ಳುವಲ್ಲಿ ಬಹುಪ್ರಮುಖವಾಗಿವೆ. ಹಾವು, ಚೇಳು, ಜ್ವರಗಳ ಬಾಧೆಗಳಿಗಾಗಿ, ಕರ್ಮೋಪಶಮನಗಳಿಗಾಗಿ, ವಿದ್ಯಾರ್ಜನೆಗಳಿಗಾಗಿ, ಧಾನಕ್ಕಾಗಿ, ಓದುವಿಕೆಗಾಗಿ, ಕೇಳುವಿಕೆಗಾಗಿ, ಸ್ವ-ಬಳಕೆಗಾಗಿ, ಮೋಕ್ಷಾಪೇಕ್ಷೆಗಳಿಗಾಗಿ ಮತ್ತು ಪುತ್ರಸಂತಾನಕ್ಕಾಗಿ ಹೀಗೆ ಏನೆಲ್ಲವುಗಳ ಫಲಾಪೇಕ್ಷೆಗಳ ಸಾಧನೆಗಳಿಗಾಗಿ, ಪ್ರತೀಕಗೊಂಡಂತಹ ಹಸ್ತಪ್ರತಿಗಳೇ ಕಂಡುಬರುತ್ತವೆ.

ಪಂಪ, ರನ್ನ, ಪೊನ್ನಾದಿಗಳು ಇವರು ಆಶ್ರಯದಲ್ಲಿದ್ದುಕೊಂಡು ಲೌಕಿಕ ಕೃತಿಗಳನ್ನು ಬರೆದಿದ್ದಾರೆ. ಅವರ ಆಶ್ರಯದಾತರೊಂದಿಗೆ ಸಾಹಿತ್ಯದ ಸಂಸ್ಕೃತಿಯನ್ನು ಜನರೊಂದಿಗೆ ಬಿಂಬಿಸುವಂತೆ ಲೋಕ ರೂಢಿಗಳನ್ನು ಒಳಗೊಂಡಂತೆ ಆಚಾರ ವಿಚಾರಗಳು ಸಾಂಪ್ರದಾಯಗಳೊಂದಿಗೆ ಎಲ್ಲರನ್ನು ಮೆಚ್ಚುವಂತೆ ಇಡೀ ಕಥೆಯಲ್ಲಿ ನಾಯಕನಂತೆ ನಟಿಸಿ ಲೋಕಕಲ್ಯಾಣಕ್ಕಾಗಿ ಪಾಲನೆ ಪೋಷಣೆಗಳನ್ನು ಧಾರೆ ಎರೆದಿದ್ದಾರೆ.

ರಾಮಾಯಣ ಮಹಾಭಾರತಗಳಂತಹ ಕೃತಿಗಳು ಜಗತ್ತಿಗೆ ಹೆಸರುಗಳಿಸಿಕೊಂಡಿವೆ. ಎಂಥವರಾದರೂ ಈ ಕಥೆಗಳ ಹಿನ್ನಲೆ ಏನೆಂಬುದು ತಿಳಿದುಕೊಂಡಿರುತ್ತಾರೆ. ಈ ಕಥೆಯ ಮೂಲದಿಂದಲೂ ಬಂದಿರುವ ಅಂಶಗಳು ಇಂದೂ ಕೂಡ ಚಾಲ್ತಿಯಲ್ಲಿರುಲು ಕಾರಣವೆಂದರೆ ಸಮಾಜದಲ್ಲಿರುವವರೆಲ್ಲರೂ ಇಂಥ ಕೃತಿಗಳಿಗೆ ಬದ್ಧರಾಗಿರುತ್ತಾರೆ. ಸಾಮಾಜಿಕ, ಧಾರ್ಮಿಕ, ಐತಿಹಾಸಿಕ, ಪಾರಂಪರಿಕ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಪ್ರತಿಬಿಂಬಿಸುವಂತೆ ಒಂದೊಂದು ಕಥಾ ಸಂಕಲನಗಳು ಒಂದೊಂದು ರೂಪಗಳಾಗಿರುತ್ತವೆ. ಆದ್ದರಿಂದಲೇ ಇಷ್ಟೊಂದು ಜನರ ಮೇಲೆ ಪ್ರಭಾವ ಬೀರಲು ಇವುಗಳು ಬಹುಮುಖ್ಯವಾಗಿವೆ.

ಹಸ್ತಪ್ರತಿಗಳು ಸಮಾಜಿಕ ಜನಾಂದೋಲನಗಳ ಪ್ರಭಾವಗಳನ್ನು ಬಿತ್ತರಿಸುವಲ್ಲಿ ಪ್ರಮುಖವಾಗಿವೆ. ಕುಮಾರವ್ಯಾಸ ಭಾರತ ಸಾಹಿತ್ಯದ ದೃಷ್ಟಿಯಿಂದಲೂ, ಸಂಸ್ಕೃತಿಯ ದೃಷ್ಟಿಯಿಂದಲೂ ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳುತ್ತಲೇ ಇವೆ. ಇದರಲ್ಲಿರುವ ಸಾಹಿತ್ಯಿಕ ಅಂಶಗಳು ಸಾಂಸ್ಕೃತಿಕ ಸಂಗತಿಗಳೂ ಜನರೊಂದಿಗೆ ಹಾಸು ಹೊಕ್ಕಾಗಿ ದೈವೀಕಮನೋಭಾವನೆಯನ್ನು ಪಡೆದುಕೊಂಡಿದೆ. ರಟ್ಟಮತದಲ್ಲಿ ಕರ್ನಾಟಕದ ಸಾಮಾಜಿಕ ಸಂಗತಿಗಳಲ್ಲಿದೆ. ಅಲ್ಲಿಯ ಭೂಮಿಯ ಸಂಮೃದ್ಧಿ ಫಲಪುಷ್ಪಗಳು, ಮಳೆ ಬೆಳೆಯ ಕೃಷಿ ಪ್ರಾಧ್ಯಾನ್ಯತೆಯನ್ನು ಹೇಳುತ್ತದೆ. ಭೂಮಿಯ ಸಾಗುವಳಿ ಮಾಡುವವರು ಮೊದಲು ಕುರುಬ ಜನಾಂಗದವರು. ಅವರು ಕೃಷಿಯ ಹುಟ್ಟುವಳಿಯನ್ನು ಪರಿಪೂರ್ಣವಾಗಿ ತಿಳಿದುಕೊಂಡವರು ಕೃಷಿಯ ಮೂಲ ನೆಲವನ್ನು ಬಲ್ಲಂತವರಾಗಿದ್ದರು. ಕೃಷಿಯನ್ನು ಪ್ರಾರಂಭಿಸುವಾಗ ಈ ಕೃತಿಯನ್ನು ಪಠಿಸುವ ಪೂಜಿಸುವ ಸಂದರ್ಭಗಳು ಕಂಡುಬಂದಿವೆ.

ಹಸ್ತಪ್ರತಿಗಳು ಬಹುಪರ್ಯ್ಯಾಯ ನೆಲೆಗಳಲ್ಲಿ ಬೆಳೆದು ಬಂದಿವೆ. ವಡ್ಡಾರಾಧನೆಯ ಕಥೆಗಳು ಮತ್ತು ಪಂಚತಂತ್ರ ಕಥೆಯಲ್ಲಿ ಸಾಮಾಜಿಕ, ಧಾರ್ಮಿಕ, ನೈತಿಕ ಆಡಳಿತಾತ್ಮಕ ಮತ್ತು ಆತ್ಮೀಯ ಮನೋಭಾವನೆಗಳೊಂದಿಗೆ ಜನರನ್ನು ಆಕರ್ಷಿಸುತ್ತವೆ. ಈ ಕಥೆಯಲ್ಲಿ ಬರುವ ಪಾತ್ರಗಳೊಂದಿಗೆ ಕಥೆಯಲ್ಲಿ ಕಥೆಯಾಗಿ ಬರುವುದು ಜೈನ ಸಂಪ್ರದಾಯಗಳು, ಪರಂಪರೆಗಳು, ಧಾರ್ಮಿಕ ವಿಧಿಗಳಂತವುಗಳನ್ನು ವ್ಯಾಪಕವಾಗಿ ಇಡೀ ಕಥೆಗಳ ಉದ್ದಕ್ಕೂ ಕಂಡುಬರುತ್ತವೆ. ಸ್ತ್ರೀಪಾತ್ರಗಳು, ಪುರುಷಪಾತ್ರಗಳು ಬಹುಪತ್ನಿತ್ವಗಳು, ಸಂಭೊಗಗಳು, ಮೋಸವಂಚನೆಗಳು, ಅಪಾದನೆಗಳು, ದೇಶಸಂಚಾರಗಳು, ಬ್ರಾಹ್ಮಣರ ಬೌದ್ಧಿಕ ದಾರಿದ್ರ್ಯ ಬರವಣಿಗೆಯ ವ್ಯವಹಾರಿಕ, ಅಕ್ಷರವಾರಸುದಾರಿಕೆಗಳು ಕುಲಭಿನ್ನತೆಗಳು, ಅಧಿಕಾರ ಆಸೆಗಳೊಂದಿಗೆ ಪಾತ್ರಗಳ ಸಂಮಿಲನಗಳೊಂದಿಗೆ ಕಂಡುಬರುತ್ತವೆ. ಒಬ್ಬ ಅನಾಗರಿಕನನ್ನು ರಾಜನನ್ನಾಗಿ ಮಾಡಿದ ಮಾತು, ಬರವಣಿಗೆಯೊಂದಿಗೆ ಪ್ರಾಮುಖ್ಯತೆ ಪಡೆದುಕೊಂಡಿದ್ದಾನೆ.

'ಕಾವ್ಯವಿದು ಭುವನದೊಳ್ ಸಕಲಜನರಿಂದ ಸುಶ್ರಾವ್ಯ್ಯವ್ಯಮಪ್ಪಂತೆ,... ಈ ಕಥೆಯ ನೊಲವಿನಿಂದ ಕೇಳ್ದರ್ಗೆ ಪೇಳ್ದರ್ಗೆ ಶೋಕಭಯ ದುಃಖಭಯ ಸಂಪಾಪಮಂ ಪಾಪಮಂ ನೂಕಿ ನಿರ್ಮಲತರ ಸುಬುದ್ಧಿಯಂ ಸಿದ್ಧಿಯಂ ಹರಿಕೊಡುತಿಹಂ ಕೃಪೆಯೊಳ್'[೩೧] ಲಕ್ಷ್ಮೀಶನು ತನ್ನ ಕಾವ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ. ಕಾವ್ಯವೆಂಬುದು ಇಡೀ ಜಗತ್ತಿನಲ್ಲಿ ಎಲ್ಲರೂ ಮೆಚ್ಚುವಂತಹ ಉನ್ನತ ಗುಣಗಳನ್ನು ಪಡೆದುಕೊಂಡಿರುತ್ತದೆ. ಧಾರ್ಮಿಕ, ಸಾಮಾಜಿಕ, ನೈತಿಕ ದೃಷ್ಟಿಯಲ್ಲೂ ಮೆಚ್ಚಿಕೆ ಪಡೆದಿರುತ್ತದೆ. ಇಂತಹ ಕಾವ್ಯಗಳನ್ನು ಯಾರು ಆಸಕ್ತಿ, ವಹಿಸಿ ಶ್ರದ್ಧೆಯಿಂದ ಕೇಳುತ್ತಾರೋ ಅವರಿಗೆ ಯಾವುದೇ ಭಯ ಬಂಧನಗಳಿಂದ ಮುಕ್ತರಾಗುವಂತೆ ಒಳ್ಳೆಯ ಬುದ್ಧಿಯನು ಕೊಡು, ನಮ್ಮನ್ನು ಈ ಕರ್ಮ ಬಂಧನಗಳಿಂದ ದೂರಮಾಡು ಆ ಪರಮಾತ್ಮನ ಧ್ಯಾನದಲ್ಲಿರುವಂತೆ ನಮ್ಮನ್ನು ಅನುಗ್ರಹಿಸು ತಂದೆ ಎಂದು ಸ್ಪಷ್ಟವಾಗಿ ದೇವರತ್ತ ತನ್ನ ಅಳಲನ್ನು ತೋಡಿಕೊಂಡಿದ್ದಾರೆ. ಲಿಪಿಕಾರರು ತನ್ನೊಂದಿಗೆ ಎಲ್ಲರೂ ಕೇಳುವರು ಓದುವವರು, ಬರೆಸುವವರು ಮತ್ತು ರಕ್ಷಿಸುತ್ತಿರುವವರೆಲ್ಲರಿಗೂ ಸುಖ ಸಂಮೃದ್ಧಿಯನ್ನು ನೀಡು ಎನ್ನುವ ಮಾತು ಹಸ್ತಪ್ರತಿಗಳಲ್ಲಿ ಕಾಣುತ್ತವೆ. ಲೌಕಿಕ ಹಸ್ತಪ್ರತಿಗಳನ್ನು ಬರೆಯುವಾಗ 'ಶ್ರೀ ಗಣಾದಿಪತೇನಮಃ' ಎಂದು ಬರೆದು ಪ್ರಾರಂಭಿಸುತ್ತಾರೆ. ಮತ್ತು ಕೊನೆಯಲ್ಲಿ ಹಸ್ತಪ್ರತಿಯ ಹೆಸರಿನೊಂದಿಗೆ ತಮ್ಮ ಆರಾಧ್ಯ ದೇವರ ನಾಮದಿಂದಲೇ ಮುಕ್ತಾಯಗೊಳಿಸುತ್ತಾರೆ. ಬರೆಯುವಾಗ ಮೊದಲು ಒಳ್ಳೆಯ ಶುಭದಿನಗಳಲ್ಲಿ ಪ್ರಾರಂಭಿಸಿ ಅಂತ್ಯಕ್ಕೆ ಕೂಡ ಶುಭದಿನಗಳಲ್ಲಿಯೇ ಮುಕ್ತಾಯಗೊಳಿಸುತ್ತಾರೆ. ಲಿಪಿಗೈಯುವಾಗ ಒಂದೊಂದು ಅಧ್ಯಾಯವನ್ನು ವಿದ್ವಾಂಸರೊಂದಿಗೆ ಚರ್ಚಿಸಿ ಲಿಪಿಗೈಯುತ್ತಾರೆ. ಇದೆಲ್ಲವು ಅವರಲ್ಲಿದ್ದ ಧಾರ್ಮಿಕ, ನೈತಿಕ ದೈವೀಮನೋಭಾವನೆಯನ್ನು ಎತ್ತಿ ತೋರಿಸುತ್ತದೆ. ತಾವು ಎಲ್ಲಕ್ಕೂ ದೇವರೆಂದು ಕಲ್ಪಿಸಿ ದೇವರ ಸನ್ನಿಧಾನದಲ್ಲಿಯೇ ಎಲ್ಲ ಕಾರ್ಯಕ್ರಮಗಳು ಸಾಂಗಮಯವಾಗಿ ವಿಜೃಂಭಣೆಯಿಂದ ಜರುಗಿಸುತ್ತಿದ್ದರು.

ವೈಶಂಪಾಯನಮುನಿ ಜನಮೇಜರಾಯ ತಂದೆಯ ವೃತ್ತಾಂತವನ್ನೇ ಶ್ರೀಮದ್ ಭಾಗವತ ಕಥೆಯಾಗಿ ಹೇಳುತ್ತಾನೆ. ಪರೀಕ್ಷಿತ ಮಹಾರಾಜ ಭೇಟೆಯಾಡಲು ಕಾಡಿಗೆ ಹೋದಾಗ ತಪಸ್ಸಿನಲ್ಲಿ

ನಿರತರಾಗಿದ್ದ ಕ್ಷಮಿಕ ಮಹರ್ಷಿಗೆ ಸತ್ತ ಹಾವನ್ನು ಕೊರಳಿಗೆ ಹಾಕುತ್ತಾನೆ. ಇದರಿಂದ ಅವರು ಕೋಪಗೊಂಡು ಹಾವನ್ನು ಹಾಕಿದವರಿಗೆ 'ಏಳುದಿನಗಳ ಒಳಗೆ ಇಂತಹ ಸರ್ಪ ಕಚ್ಚಿ ಸಾಯಲಿ' ಎಂದು ಶಾಪಕೊಡುತ್ತಾನೆ. ಈ ಶಾಪದ ವಿಮೋಚನೆಗಾಗಿ ಈ ಕಥೆಯನ್ನು ಹದಿನೆಂಟು ಅಧ್ಯಾಯಗಳನ್ನು ಏಳುದಿನಗಳಲ್ಲಿ ಹೇಳಿದ್ದಾನೆ. ಇದರಿಂದ ಜನಮೇಜರಾಯ ತನ್ನ ತೊನ್ನು ರೋಗದಿಂದ ಮುಕ್ತಿ ಹೊಂದುತ್ತಾನೆ. ತನ್ನ ತಂದೆಗೆ ಆದ ಅವಮಾನವನ್ನು ಸಹಿಸಲಾಗದೆ 'ಇಡೀ ಲೋಕದಲ್ಲಿ ಸರ್ಪಗಳು ಇಲ್ಲದಂತಾಗಲಿ' ಎಂದು ಶಾಪ ನೀಡುತ್ತಾನೆ. ಇದರಿಂದ ಸರ್ಪಗಳು ಮಾನವನನ್ನು ನೋಡಿದ ಕೂಡಲೇ ಜೀವಭಯದಿಂದ ಓಡಿಹೋಗುತ್ತವೆ. ಇದರಂತೆ ಸೂರ್ಯ ಶತಕ ಬರೆದ ಮಯೂರನೆಂಬ ಕವಿ ತನ್ನ ಕುಷ್ಠರೋಗದಿಂದ ನಿವಾರಣೆಗೊಳ್ಳುತ್ತಾನೆ. ಇಂತಹ ಕಥೆಗಳನ್ನು ಯಾರು ಶ್ರದ್ಧೆಯಿಂದ ಹೇಳುವರೋ ಮತ್ತು ಕೇಳುವರೋ ಅವರು ಆಯುರಾರೋಗ್ಯ ಸುಖಸಂಪತ್ತು ಪಡೆಯುತ್ತಾರೆಂಬ ನಂಬಿಕೆ ಇದೆ. ಆದ್ದರಿಂದಲೇ ಲೌಕಿಕ ಫಲಾಪೇಕ್ಷೆಗಳು ಇಂದಿಗೂ ಈಡೇರಿಸುವಲ್ಲಿ ಹಸ್ತಪ್ರತಿಗಳು ಅಜರಾಮರವಾಗಿರುವುದನ್ನು ಕಥೆಗಳಲ್ಲಿ ಸ್ಪಷ್ಟವಾಗಿ ಹಿಡಿದಿಟ್ಟಿರುವುದನ್ನು ನೋಡಬಹುದು.

ಹಸ್ತಪ್ರತಿಗಳಲ್ಲಿ ಜ್ಯೋತಿಶ್ಯಾಸ್ತ್ರವು ಒಂದು ವೈದಿಕ ಶಕ್ತಿಯಾಗಿ ಇಂದು ಕೂಡ ಜೀವಂತವಾಗಿದೆ. ಇದರಲ್ಲಿ ಬೇಡಿಕೆಯನ್ನಿಟ್ಟುಕೊಂಡು ಕೆಲವೊಂದು ಅನಿಸಿಕೆಗಳು, ಮನಸ್ಥಾಪಗಳನ್ನು ಈಡೇರಿಸುತ್ತವೆ. ಕಳದು ಹೋದವರನ್ನು ಹುಡುಕುವುದು, ಹಸ್ತನೋಡಿ ಅವರ ಬಲವನ್ನು ಹೇಳುವುದು, ಔಷದೋಪಚಾರ ಮಾಡುವುದು, ಬಾವಿ ತೋಡಿಸುವುದು, ಬೇಕಾದುದನ್ನು ಪಡೆಯುವುದು ಮತ್ತು ರೋಗಲಕ್ಷಣಗಳಿಂದ ಗುಣಪಡಿಸುವುದು ಇವೆಲ್ಲವುಗಳನ್ನು ಪ್ರಮುಖವಾಗಿ ರಾಶಿ ನಕ್ಷತ್ರ ಬಲದೊಂದಿಗೆ ಒಂದು ಒಳ್ಳೆಯ ಶುಭದಿನವನ್ನೇ ಮೀಸಲಾಗಿಟ್ಟಿರುತ್ತಾರೆ. ರವಿವಾರ ಅಮವಾಸ್ಯೆಯ ದಿನ ಕಳ್ಳತನ ಯಾರು ಮಾಡುತ್ತಾರೋ ಅವರು ಅಂದು ಸಿಗದೆ ಹೋದರೆ ಇನ್ನೆಂದಿಗೂ ಸಿಗುವುದಿಲ್ಲ ಎಂಬ ನಂಬಿಕೆಯೂ ಕೂಡ ಒಂದಾಗಿದೆ.

ಕನ್ನಡ ಹಸ್ತಪ್ರತಿಗಳು ಶುದ್ಧಸಾಹಿತ್ಯ ಮತ್ತು ಸ್ವಯಂ ಸಾಹಿತ್ಯ ಎಂಬುವುದರ ಮನಸ್ಸುಗಳ ಮನಸ್ಸಿನಲ್ಲಿ ಧಾರ್ಮಿಕವಾಗಿ, ಸಾಮಾಜಿಕವಾಗಿ ಒಡಮೂಡಿಕೊಂಡಿವೆ. ಜನರ ಹಿತಾಸಕ್ತಿಗಳಿಗೆ ಬೆನ್ನೆಲುಬುಗಳಾಗಿ ನಿಂತುಕೊಂಡು ಎಲ್ಲಕ್ಕೂ ಮುಂಜಾಗ್ರತೆಯ ಮುನ್ಸೂಚನೆಗಳನ್ನು ನೀಡುತ್ತಲೇ ಇರುವುದನ್ನು ಸಂಸ್ಕೃತಿ ಕ್ಷೇತ್ರದಲ್ಲಿ ಲೌಕಿಕ ಹಸ್ತಪ್ರತಿಗಳು ಬಹುಮುಖ್ಯವಾದ ಪಾತ್ರವನ್ನು ವಹಿಸಿಕೊಂಡಿವೆ.

**೪.೪. ಹಸ್ತಪ್ರತಿಗಳ ದಾರ್ಶನಿಕ ನೆಲೆಗಳು :**

ಹಸ್ತಪ್ರತಿಗಳನ್ನು ನವರಾತ್ರಿ, ದೀಪಾವಳಿ ಸಂದರ್ಭಗಳಲ್ಲಿ ವಿಶೇಷವಾಗಿ ಒಂಭತ್ತು ದಿನಗಳವರೆಗೂ 'ಸರಸ್ವತಿಪೂಜೆ'ಯೆಂದು ಆಚರಿಸುತ್ತಾರೆ. ರಾತ್ರಿಯೆಲ್ಲಾ ಹಣತೆಯ ದೀಪವೊಂದು ಉರಿಸುತ್ತ ಹರಿಕಥೆ. ಪುರಾಣ ಪುಣ್ಯಕಥೆಗಳನ್ನು ಹೇಳುತ್ತಾ ಕಾಲ ಕಳೆಯುತ್ತಿದ್ದರು. ಬರವಣಿಗೆಯ ಒಂದೊಂದು ವಸ್ತುಗಳು ದೇವರೆಂಬ ಮನೋಭಾವನೆಯಿಂದ ಕಂಡುಕೊಳ್ಳುತ್ತಿದ್ದರು. ಹಿರಿಯರು ಚಿಕ್ಕಮಕ್ಕಳಿಗೆ

'ಬೆನಕಾ ಬೆನಕಾ' ಏಕದಂತ! ಪಚ್ಚೆಕಲ್ಲು! ಪಾಣೀಪೀಠ! ಮುತ್ತಿನುಂಡಿ! ಹೊನ್ನಘಂಟೆ! ಇಂತಿ ಒಪ್ಪುವ ಸಿರಿಸಿದ್ಧಿ ವಿನಾಯಕ ದೇವರ ಪಾದಕ್ಕೆ ಇಪ್ಪತ್ತೊಂದು ನಮಸ್ಕಾರಗಳು'.[೩೨] ಈ ಪ್ರಾರ್ಥನೆಯನ್ನು ಹೇಳುತ್ತಿದ್ದರು. ನಂತರ ಎಲ್ಲರೂ ಶಿರಸಾಷ್ಟಾಂಗವಾಗಿ ನಮಸ್ಕರಿಸುತ್ತಿದ್ದರು. ಅಂದು ಮನೆಯನ್ನು ವಿಶೇಷವಾಗಿ ಅಲಂಕರಿಸಿ ತಳಿರು ತೋರಣಗಳನ್ನು ಕಟ್ಟುತ್ತಿದ್ದರು. ಉಪ್ಪರಿಗೆಯಲ್ಲಿದ್ದ ಹಸ್ತಪ್ರತಿಗಳನ್ನು ತೆಗೆದು ಗಂಧ ಲೇಪನಗಳಿಂದ ಶುಚಿಗೊಳಿಸುತ್ತಿದ್ದರು. ಹೂವು, ಅರಿಷಿಣ, ಕುಂಕುಮ ಲೋಬಾನಗಳಿಂದ ಸುವಾಸನೆ ಬೀರುವಂತೆ ಪೂಜಿಸುತ್ತಿದ್ದರು. ಇಂಥ ಆಚರಣೆಗಳನ್ನು ಮಾಡಿದರೆ ಅನಿಷ್ಠ ನಿಯಮಗಳು, ಅಡ್ಡಿ ಆತಂಕಗಳು ನಮ್ಮೊಂದಿಗೆ ಸುಳಿಯಲಾರವು ಎಂದು ಧಾರ್ಮಿಕ ಆಚರಣೆಗಳನ್ನು ಶ್ರದ್ಧೆಯಿಂದ ಆಚರಿಸುತ್ತಿದ್ದರು. ಈ ಸಮಯದಲ್ಲಿ ಮಲಗಿದರೆ ನಾವು ಮಾಡಿದ ಪೂಜೆಯೆಲ್ಲಾ ವ್ಯರ್ಥವಾಗುತ್ತದೆಯೋ ಎಂಬ ನಂಬಿಕೆಯಿಂದ ರಾತ್ರಿ ದಿನವೆಲ್ಲವು ಎಣ್ಣೆದೀಪಗಳನ್ನು ಹಚ್ಚಿ ಕಾದುಕುಳಿತುಕೊಳ್ಳುತ್ತಿದ್ದರು. ಇದು ಅಂದಿನ ಆಚರಣೆಗಳಲ್ಲಿ ಬಹುಪ್ರಮುಖವಾಗಿತ್ತು. ಇತ್ತೀಚಿನ ದಿನಗಳಲ್ಲಿ ಇಂಥ ಆಚರಣೆಗಳು, ನಡೆಯುತ್ತಲೆ ಇವೆ. ಇದರ ಪರ್ಯಾಯರೂಪವಾಗಿ ಸತ್ಯ ನಾರಾಯಣ ವ್ರತ, ಮಹಾಲಕ್ಷ್ಮೀ ವ್ರತ, ಗಜಾಗೌರಿ ವ್ರತ, ಶಿವಪಾರ್ವತಿಯರ ವ್ರತ, ಜಾಗರಣೆಯ ವ್ರತ, ಶ್ರಾವಣ ವ್ರತ, ವಿಘ್ನೇಶ್ವರ ವ್ರತವಂಥೂ ಇಡೀ ದೇಶದಲ್ಲಿಯೇ ಒಂಭತ್ತು ದಿನಗಳವರೆಗೆ ರಾತ್ರಿ, ಹಗಲೆನ್ನದೇ ವಿಜೃಂಭಣೆಯಿಂದ ಪ್ರತಿಯೊಬ್ಬರ ಮನೆಯಲ್ಲಿಯೂ ನಡೆಯುತ್ತದೆ.

ಪುರಾಣಗಳು ಸಾಹಿತ್ಯದ ಪ್ರತಿಬಿಂಬ ಎನ್ನುವಂತೆ ಮೂಡಿಬಂದಿದೆ. ಇದು ಬರವಣಿಗೆಯ ಮೇಲೆ ನಮ್ಮ ಪ್ರಾಚೀನರಿಗೆ ಇದ್ದ ಕಲ್ಪನೆಯನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ. ಪುರಾಣ, ಪ್ರವಚನಗಳು, ಪುಣ್ಯಕಥೆಗಳನ್ನು ಕೇಳುವುದರ ಮೂಲಕ ಜನರು ಧಾರ್ಮಿಕ ಮನೋಭಾವನೆಯನ್ನು ಕಂಡುಕೊಳ್ಳುತ್ತಾನೆ. ಮೋಕ್ಷ ಸಂಪಾದಿಸುತ್ತಾರೆ. ಆದ್ದರಿಂದಲೇ ಬರವಣಿಗೆಯನ್ನು ದೈವೀ ನೆಲೆಯಾಗಿರಿಸಿಕೊಂಡು ಪುಸ್ತಕ ಎಂದರೆ ದೇವರು ಎಂದುಕೊಳ್ಳುವಂತಾಗಿದೆ.

'ಪುಸ್ತಕವನ್ನು ತ್ರಿಮೂರ್ತಿ ಸ್ವರೂಪವೆಂದು ಭಾವಿಸಿ
ತ್ರಿದೇವಂ ಪುಸ್ತಕಂ ವಿದ್ಯಾತ್ಸೂತ್ರಮ ವಾಸುಕೀರುಚ್ಯತೇ'.[೩೩]

ಪುಸ್ತಕವು ಬ್ರಹ್ಮ, ವಿಷ್ಣು, ಮಹೇಶ್ವರ ಎಂದೂ ತ್ರಿಮೂರ್ತಿ ಸ್ವರೂಪ ಹೊಂದಿದೆ. ಸುತ್ತುವ ದಾರ ಘಟಸರ್ಪ ಎಂದೂ ಈ ದಾರ ನಿರ್ದಿಷ್ಟ ಅಳತೆಯಾಗಿದ್ದು, ಅದರ ಅಗಲ ಮತ್ತು ಉದ್ದವನ್ನು ಬ್ರಹ್ಮನೆಂದೂ, ಅಕ್ಷರಗಳನ್ನು ಮಹಾವಿಷ್ಣುವೆಂದೂ, ಲಿಪಿಯ ನಿಲುವನ್ನು ಮಹೇಶ್ವರನೆಂದೂ ಹೀಗೆ ವ್ಯವಸ್ಥಿತವಾಗಿ ಒಂದೊಂದು ಅಳತೆಯನ್ನು ಹೊಂದಿದ್ದರಿಂದಲೇ ನೈಜಗುಣದೊಂದಿಗೆ ಉನ್ನತೀಕರಿಸಲಾಗಿದ್ದು, ದೈವೀ ಸಂಭೂತವೆಂದು ಗ್ರಂಥ ಹೊತ್ತಿಗೆ, ಪುಸ್ತಕ ಸರಸ್ವತಿ ಎಂತಲೂ ಗುರುತಿಸಿದ್ದಾರೆ. ಪುಸ್ತಕ ಅಳತೆ ನಿಯಮಗಳನ್ನು ಅಳವಡಿಸಿಕೊಂಡರೆ, ಲಿಪಿಕಾರ, ಸಮಯ, ನಿಷ್ಠೆ, ಕ್ರಿಯೆಗಳನ್ನು ಆಸಕ್ತಿಯಿಂದ ಅನುಸರಿಸಿಕೊಂಡು ಲಿಪಿಗೈಯುವುದರಲ್ಲಿ ತಲ್ಲೀನನಾಗುತ್ತಾನೆ.

ಈ ಹಸ್ತಪ್ರತಿಗಳು ಧರ್ಮವನ್ನು ಕೇಂದ್ರವಸ್ತುವನ್ನಾಗಿಸಿರಿಸಿಕೊಂಡು ಧಾರ್ಮಿಕ ಅಪೇಕ್ಷಣೆಗೆ ಒಳಪಟ್ಟಿದು, ಧರ್ಮ ಪರಿಪಾಲನೆಯನ್ನುಂಟುಮಾಡುವುದು, ಜಡಧರ್ಮವನ್ನು ಧಿಕ್ಕರಿಸಿ ನಡೆಯುವುದು, ಸಂಸ್ಕೃತಿಯನ್ನು ತೀಕ್ಷ್ಣಗೊಳಿಸುವುದು, ಈ ಧಾರ್ಮಿಕ ಹಸ್ತಪ್ರತಿಗಳ ಉದ್ದೇಶವಾಗಿದೆ. ಧರ್ಮಗ್ರಂಥಗಳನ್ನು ಲಿಪಿಗೈಯುವಾಗ ಲಿಪಿಕಾರನಿಗೆ ತಾನು ಕಟ್ಟಿಕೊಡಬೇಕಾದ ಧರ್ಮವೇ ಮೂಲವಾಗಿರುತ್ತದೆ. ಬಸವ ಪುರಾಣವನ್ನು ಬರೆದ ಭೀಮಕವಿ 'ಶ್ರೀ ಗುರು ಬಸವಲಿಂಗಾಯನಮಃ। ಶ್ರೀ ಗಣಾಧಿಪತಿಯೇ ನಮಃ। ಈ ಪ್ಲವಂಗ ನಾಮ ಸಂವತ್ಸರದ ಶ್ರಾವಣ ಬ-೧೩ ಯಲ್ಲು ಬಸವೇಶ್ವರ ಪುರಾಣ ಸಮಾಪ್ತಿ ಮಂಗಳ ನಿಭವಂತು ಮಂಗಳಮಸ್ತು॥ ಶ್ರೀಶ್ರೀಶ್ರೀ'.[೩೪] ಈ ಹಸ್ತಪ್ರತಿ ವೀರಶೈವ ಧರ್ಮವನ್ನು ಪ್ರತಿಬಿಂಬಿಸುತ್ತದೆ. ಮೊದಲು ಓಂ ಎಂದು ಬರೆದು ಇಷ್ಟದೇವತೆಯನ್ನು ನೆನೆಯುವ ಮೂಲಕ ಲಿಪಿಗೈಯಲು ಪ್ರಾರಂಭಿಸುತ್ತಿದ್ದರು. ಅಂತ್ಯದಲ್ಲಿ ಮಂಗಳಸ್ತೋತ್ರದೊಂದಿಗೆ ಮುಕ್ತಾಯ ಗೊಳಿಸುತ್ತಿದ್ದರು. ಬರವಣಿಗೆಯನ್ನು ಓದುವಾಗ ಬರೆಯುತ್ತಿರುವಾಗ ಒಳ್ಳೆಯ ದಿನಗಳನ್ನು ಆಧರಿಸಿಕೊಳ್ಳುತ್ತಿದ್ದರು. ಲಿಪಿಗೈಯುವಾಗ ಚರ್ಚೆಗಳು ನಡೆಯುತ್ತಿದ್ದವು. ಅವುಗಳಿಂದ ಕೆಲವು ಮಾಹಿತಿಯನ್ನು ಪಡೆದುಕೊಂಡು ಲಿಪಿಗೈಯುವುದರಲ್ಲಿ ತಲ್ಲೀನರಾಗುತ್ತಿದ್ದರು.

ಧಾರ್ಮಿಕ ನಂಬಿಕೆಗಳು ಲಿಪಿಕಾರರನ್ನು ಬಿಟ್ಟಿಲ್ಲ. ಶೀಘ್ರವಾಗಿ ಬರೆಯುವವನು ತೇಜಶ್ಯಾಲಿಯಾಗಿರುತ್ತಾನೆ. ದುರ್ಗುಣಗಳಿಂದ ಕೃತಿ ಬರೆದರೆ ದರಿದ್ರನಾಗುವನು. ಜನ್ಮ ದಿನಗಳಲ್ಲಿ ಬರೆದರೆ ಆಯುಸ್ಸು ಕುಗ್ಗುವುದು ಲಿಪಿಕಾರ ನಿಶ್ಚಲ ಮನಸ್ಥೈರ್ಯವುಳ್ಳವನೂ, ಸಧೃಡ ಕಾಯಕನೂ ಆಗಿರಬೇಕು. ಮತ್ತು ಸತತ ಅಭ್ಯಾಸ, ಧೈರ್ಯ, ಮನೋಭಾವನೆ, ಶಾಂತಚಿತ್ತನಾಗಿರಬೇಕು. ಶ್ರದ್ಧಾಂವಂತನಾಗಿರಬೇಕು. ಬರಹಕಾರನು ಬರೆದ ಅಕ್ಷರಗಳು ಎಷ್ಟು ಕಾಲವಿರುವವೋ ಅಷ್ಟುಕಾಲ ಸ್ವರ್ಗದಲ್ಲಿ ಪೂಜಿತರಾಗುತ್ತಾರೆ. ಧರ್ಮಶಾಸ್ತ್ರಗಳನ್ನು ವಾಚನ ಮಾಡುವವರೂ ಸ್ವರ್ಗದಲ್ಲಿ ಪೂಜಿತರಾಗುತ್ತಾರೆ. ಕುಟುಂಬದ ಪೋಷಣೆಗಾಗಿ, ಹಣದ ಆಸೆಗಾಗಿ ಬರೆಯುವಂಥವರಿಗೆ ಮೋಕ್ಷ ಹೊಂದುವುದಿಲ್ಲ. ಈ ಗ್ರಂಥಗಳನ್ನು ಯಾರು ಅವಹೇಳನಕಾರಿಯಾಗಿ ತಿರಸ್ಕರಿಸುವವರು ಅಕ್ಷರಗಳು ಇರುವಷ್ಟು ಕಾಲ ನರಕದಲ್ಲಿ ಒದ್ದಾಡುತ್ತಾರೆಂಬ ನಂಬಿಕೆ.

ಹಸ್ತಪ್ರತಿಗಳಲ್ಲಿ ಮೊದಲಿಗೆ ರತ್ನತ್ರಯರು ಆಗಮಿಕ ಕಾವ್ಯಗಳನ್ನು ಬರೆದು ತಮ್ಮ ಧರ್ಮವನ್ನು ಚಿರಸ್ಥಾಯಿಯಾಗಿ ಉಳಿಸಿಕೊಳ್ಳುವುದರ ಜೊತೆಗೆ ಧರ್ಮಪರಿಪಾಲಕರಾದ ಆಶ್ರಯದಾತರ ಮೇಲೆ ಕಾವ್ಯಗಳನ್ನು ಬರೆದು ತಾವು ಲೋಕಕಲ್ಯಾಣಾರ್ಥರಾಗುತ್ತಾರೆ. ಧಾರ್ಮಿಕ ಕೃತಿಗಳಾದ ಪಂಪನ ಆದಿಪುರಾಣ, ಪೊನ್ನನ ಶಾಂತಿಪುರಾಣ, ರನ್ನನ ಅಜಿತ ಪುರಾಣ, ನಾಗಚಂದ್ರನ ಮಲ್ಲಿನಾಥಪುರಾಣ, ಜನ್ನನ ಅನಂತಪುರಾಣ ಮತ್ತು ಚಾವುಂಡರಾಯನ ಚಾವುಂಡಪುರಾಣ ಇವು ಪ್ರಮುಖವಾಗಿವೆ. ಧಾರ್ಮಿಕ ಮನೋಭಾವನೆಯೊಂದಿಗೆ ಚಿತ್ರಣಗೊಂಡಿವೆ.

ಶಾಂತಿಪುರಾಣ ದಾನದ ಪ್ರಕ್ರಿಯೆಯಾಗಿ ಮೊದಲು ಜನಪ್ರಿಯವಾಗಿದೆ. ಇದರಿಂದಲೇ ಧರ್ಮದ ಕೃತಿಗಳು ಶಾಸ್ತ್ರೋಕ್ತವಾಗಿ ಬೆಳೆದು ಬಂದವು. ಜೈನರು ಶಾಸ್ತ್ರಧಾನಕ್ಕೆ ವಿಶೇಷವಾದ ಆಧ್ಯತೆ

ನೀಡಿದರು. ದಾನಗಳಲ್ಲಿ ವಿದ್ಯೆದಾನ, ಅನ್ನದಾನ, ವಸ್ತ್ರದಾನ ಮತ್ತು ಕನ್ಯಾದಾನಗಳು ವ್ಯಾಪಕವಾಗಿ ಬಳಕೆಗೆ ಬಂದವು. ಈ ಧರ್ಮಗಳಲ್ಲಿ ಹೆಸರುಗಳಿಸಿಕೊಂಡವರೆಂದರೆ ಸತ್ಯಕ್ಕೆ ಹೆಸರಾದ ಸತ್ಯಹರಿಶ್ಚಂದ್ರ, ದಾನವೀರ ಶೂರನೆಂದನಿಸಿಕೊಂಡ ಕರ್ಣ, ಧರ್ಮದಲ್ಲಿ ಪ್ರಗತಿ ಹೊಂದಿದ ಧರ್ಮರಾಯ, ತ್ಯಾಗಕ್ಕೆ ಹೆಸರಾದ ಭಾಗೀರಥಿ ದೇವಿ ಇವರೆಲ್ಲರೂ ಜಗತ್‌ಪ್ರಸಿದ್ಧರೆಂದೆನಿಸಿಕೊಂಡಿದ್ದಾರೆ.

ಸಾಹಿತ್ಯ ಸಂಸ್ಕೃತಿಯಲ್ಲಿ ಹಸ್ತಪ್ರತಿಗಳು ಧರ್ಮದ ನೆಲೆಯಲ್ಲಿ ವಿವಿಧ ರೂಪಗಳಿಗೆ ಅನುಗುಣವಾಗಿ ಸಮಸ್ತ ಪ್ರಜ್ಞೆಯ ಧರ್ಮವನ್ನು ಆಚರಿಸುತ್ತವೆ. ಧರ್ಮ ವ್ಯಕ್ತಿಯ ನಡುವೆ ಆವಿನಾಭಾವ ಸಂಬಂಧ ಹೊಂದಿದ್ದಾನೆ. 'ಧಾರ್ಮಿಕ ಅನುಭವವನ್ನು ವ್ಯಕ್ತಿನೆಲೆಯಲ್ಲಿ ವ್ಯಾಖ್ಯಾನಿಸುವ, ಅನ್ವೇಷಕನ ತಾಕಲಾಟಗಳನ್ನು ಹೊಂದಿದಂಥವು. ಆಧುನಿಕರೂ ಕೂಡ ಭಕ್ತಿಮಾರ್ಗದಲ್ಲಿ ಧರ್ಮವು ಕಾವ್ಯದೊಡನೆ ಪಡೆಯುವ ಸಂಬಂಧವನ್ನೇ ಹೆಚ್ಚು ಮಾನ್ಯ ಮಾಡಿದ್ದಾರೆ'.[೩೫] ಆಧುನಿಕ ಸಾಹಿತ್ಯದಲ್ಲಿ ಪೂರ್ವ ಕಲ್ಪನೆಯ ಆಧಾರದ ನಿಲುವುಗಳನ್ನು ಸಲ್ಲಿಸುತ್ತಾರೆ. ಇದರಿಂದ ಇನ್ನಷ್ಟು ಪ್ರಭಾವ ಬೀರುತ್ತದೆ. ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮತ್ತು ಸರ್ವಜ್ಞರೆಲ್ಲರ ವಚನಗಳು ಅಂದಿನಿಂದ ಇಂದಿನವರೆಗೂ ಹೊಸ ಅಂಶದತ್ತ ನಮ್ಮನ್ನು ಸೆಳೆಯುವಂತೆ ಮಾಡುತ್ತದೆ. ಇವರು ತಮ್ಮ ದಾರ್ಶನಿಕ ನೆಲೆಯಲ್ಲಿಯೇ 'ಕಾಯಕವೇ ಕೈಲಾಸ' ಎಂದು ನಿಷ್ಠೆಯಿಂದ ಅಳವಡಿಸಿಕೊಂಡು ಪ್ರಗತಿಯನ್ನು ಸಾಧಿಸಿದ್ದಾರೆ.

ಕನ್ನಡ ಹಸ್ತಪ್ರತಿಗಳು ಜಗತ್ತಿಗೆ ಕರ್ಮಸಿದ್ಧಾಂತಗಳನ್ನು ವ್ಯಾಪಕವಾಗಿ ವಿಸ್ತರಿಸಿಕೊಂಡಿವೆ. ಇವು ಆಂತರಿಕವಾದ ದಟ್ಟತೆಗಿಂತ ಭೌತಿಕ ದಟ್ಟತೆಯನ್ನು ವಿಶಾಲವಾಗಿ ಹಬ್ಬಿಕೊಂಡಿವೆ. ಹಸ್ತಪ್ರತಿಗಳ ಆಂತರಿಕ ಜಗತ್ತೂ ಔಪಚಾರಿ ನೆಲೆಗಳು ಮತ್ತು ಪಾರಮಾರ್ಥಿಕ ನೆಲೆಗಳು ನಿರಾಕರಿಸುತ್ತವೆ. 'ಜ್ಞಾನಾರ್ಜನೆ, ಜ್ಞಾನರಕ್ಷಣೆ, ಶುದ್ಧಿಯಾರ್ಜನೆ, ಅನಿಷ್ಟನಿವಾರಣೆ, ಹಾರೈಕೆ, ಸಮಯನಿಷ್ಠೆ, ಸಂಪ್ರೀತಿ ಕರ್ಮೋಪಶಮನ, ಸಾಧನೆ, ಸಿದ್ಧಿ, ಆಯುರಾರೋಗ್ಯ ಭಾಗ್ಯ, ಸಂತಾನ ಪ್ರಾಪ್ತಿ, ವಂಶಾಭಿವೃದ್ಧಿ, ಸಕಲೈಶ್ವರ್ಯ, ಜೀವನಸೌಖ್ಯ, ಮನೋಭೀಷ್ಟ, ಕಾರ್ಯಸಿದ್ಧಿ, ಪುಣ್ಯ ಸಂಪಾದನೆ, ದಾನ'.[೩೬] ಹೀಗೆ ಏನೆಲ್ಲವುಗಳನ್ನು ಮಾನವನ ಫಲಾಪೇಕ್ಷೆಗಳಾಗಿ ಅಮೂರ್ತ ತತ್ವಗಳನ್ನು ಕಂಡುಕೊಂಡು ಶ್ರೇಷ್ಠನನ್ನಾಗಿ ಮಾಡಿ ಒಳ್ಳೆಯ ಮಾರ್ಗದಲ್ಲಿ ನಡೆಯುವಂತೆ ಸಲಹೆಗಳೊಂದಿಗೆ ಅಪೇಕ್ಷೆಯ ಫಲಗಳನ್ನಾಧರಿಸುವಂತೆ ಎಂತಹ ಕಷ್ಟದಲ್ಲಿ ಸಿಲುಕಿರುವವರನ್ನೂ ಕೂಡ ಕೈಹಿಡಿದು ನಡೆಸಿ ಮುಂದಕ್ಕೆ ಹೋಗುವ ಮಾರ್ಗವನ್ನು ತೋರಿಸುತ್ತದೆ.

ಹಸ್ತಪ್ರತಿಗಳಲ್ಲಿ ಪುರುಷಾರ್ಥಗಳು ವ್ಯಕ್ತಿಯ ಸಾಧನೆಗಳನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯುವ ಮೋಕ್ಷಪಥಗಳಾಗಿವೆ. ಇವು ಕಾವ್ಯದ ನೆಲೆಯಲ್ಲಿ ಮತ್ತು ಇತಿಹಾಸ ಪುರಾಣಗಳಿಂದಲೂ ಕಂಡುಬರುತ್ತವೆ. ಕಾವ್ಯಗಳಲ್ಲಿ ನಡೆದಿರುವ ಚರ್ಚೆಗಳಿಗಿಂತ ಕೇಳುವುದರ ಆಸಕ್ತಿ ಪ್ರಮುಖವಾಗಿರುತ್ತದೆ. ಕಾವ್ಯದ ಆಶ್ರಯಗಳು ಭಿನ್ನವಾಗಿದ್ದರೂ ಅದನ್ನು ಪಾಲಿಸುವ ಮತ್ತು ಪೂಜಿಸುವುದರೊಂದಿಗೆ ಪ್ರೇರಿತರಾಗಿದ್ದೇವೆ. ವ್ಯಕ್ತಿಯ ಜೀವನದ ಮೌಲ್ಯಗಳನ್ನು ಪಡೆದುಕೊಳ್ಳುವುದರ ಜೊತೆಗೆ ಧರ್ಮ, ಅರ್ಥ, ಕಾಮ ಸಾಧನೆಗಳ ಪ್ರಾಮುಖ್ಯತೆಯೇ ಮೋಕ್ಷ. ಇವುಗಳನ್ನು ಸರಿಯಾದ ರೀತಿಯಲ್ಲಿ ಅನುಸರಿಸುವುದು ಮಾನವನ ಆದ್ಯ ಕರ್ತವ್ಯ.

ಕನ್ನಡ ಹಸ್ತಪ್ರತಿಗಳ ಗುಣವೇ ನೈಜಮಟ್ಟದಲ್ಲಿ ಕಂಡುಕೊಳ್ಳುವಂತೆ ಸಹಕರಿಸುತ್ತವೆ. ಓದುತ್ತಲೇ ಇರುವಾಗ ನಮ್ಮ ಜೀವನ ಇದೊಂದು ನಶ್ವರ. ನಾವು ಸುಖ–ಭೋಗ ಜೀವನ ನಡೆಸಿಕೊಳ್ಳಲು ತತ್ವಗಳಿಂದ ನಟನೆ ಮಾಡುವ ಗೊಂಬೆಗಳಾಗಿದ್ದೇವೆ. ನಮ್ಮ ಕಣ್ಣಿಗೆ ಕಾಣುವ ಜಗತ್ತೆಲ್ಲವೂ ಮಾಯೆ, ಅಜ್ಞಾನ, ಆಲಸ್ಯ, ಅಂಧಕಾರಗಳಿಂದ ತುಂಬಿದೆ. ಆದ್ದರಿಂದ ಜ್ಞಾನಿಗಳಾದವರೂ ಈ ಕ್ಷಣಿಕ ಜೀವನಕ್ಕೆ ಮಾರುಹೋಗದೆ ಶಾಶ್ವತ ಸುಖ ಜೀವನಕ್ಕೆ ಕೊಂಡೊಯ್ಯುವಂತೆ ಸಹಕರಿಸುತ್ತಾರೆ. ಆದ್ದರಿಂದಲೇ ವೇದಗಳು ಆಶ್ರಮಗಳನ್ನು ಕಲ್ಪಿಸಿಕೊಟ್ಟಿವೆ. ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾಹನಪ್ರಸ್ಥಾಶ್ರಮ ಮತ್ತು ಸಂನ್ಯಾಶಾಸ್ತ್ರಮಗಳಂತೆ ಒಂದೊಂದು ಕಾಲದಲ್ಲಿ ಒಂದನ್ನು ಆಶ್ರಯಿಸುವಂತೆ ಮಾನವನಿಗೆ ಸಹಕರಿಸಿ ತಾನು ಕಂಡುಕೊಳ್ಳಲಿರುವ ಶಾಶ್ವತವಾಗಿ ಮೋಕ್ಷಪಥದಲ್ಲಿ ನೆಲೆಸುತ್ತಾನೆ ಎನ್ನುವ ಹಿಂದೂ ಧರ್ಮದ ನಂಬಿಕೆ.

ಕನ್ನಡ ಸಂಸ್ಕೃತಿಯಲ್ಲಿ ಹಸ್ತಪ್ರತಿಗಳು ಮಾನವನನ್ನು ಯೋಗ್ಯನನ್ನಾಗಿಸಿ ಒಂದು ಧರ್ಮವನ್ನು ಪಾಲಿಸಿ ಆ ಧರ್ಮದಲ್ಲಿಯೇ ತಾನು ಮೋಕ್ಷಪಥಹೊಂದುತ್ತಾನೆ. ಧಾರ್ಮಿಕವಾಗಿ, ಸಾಮಾಜಿಕವಾಗಿ ದೈವೀನೆಲೆಯನ್ನು ಪಡೆದುಕೊಂಡು ತಾನು ಶ್ರದ್ಧೆ, ದೈವ, ಭಕ್ತಿ, ಆಚರಣೆಗಳನ್ನು ಪಾಲಿಸುತ್ತಾನೆ. ವ್ಯಕ್ತಿಯ ಫಲಾಪೇಕ್ಷೆಗಳಿಗೆ, ಸಾಮುದಾಯಿಕ ಮನೋಭಾವಗಳಿಗೆ, ಕುಂದುಕೊರತೆಗಳಿಗೆ ನಿವಾರಣೋಪಾಯಗಳಾಗಿವೆ. ಈ ಹಸ್ತಪ್ರತಿಗಳನ್ನು 'ಸಂಜೀವಿನಿ ಮಣಿ'ಗಳೆಂದು ಕರೆಯಬಹುದು.

**೪.೫. ಹಸ್ತಪ್ರತಿಗಳ ತಾಂತ್ರಿಕ ನೆಲೆಗಳು :**

ಕನ್ನಡ ಹಸ್ತಪ್ರತಿಗಳು ಸಂಸ್ಕೃತಿಯ ಗಣಿಯಿದ್ದಂತೆ ಹಲವು ಕುಶಲ ಸಮುದಾಯಗಳ ಮೊತ್ತವೇ ಹಸ್ತಪ್ರತಿಗಳ ಜಗತ್ತು.ವ್ಯಕ್ತಿ ಜೀವಿಸಲು ಪರಿಸರ ಅವಶ್ಯಕ. ಪರಿಸರಕ್ಕೆ ತಕ್ಕಂತೆ ಕ್ರಿಯಾತ್ಮಕತೆಯೂ ಅಗತ್ಯ. ಕಣ್ಣಿಗೆ ಹಿತವನ್ನುಂಟುಮಾಡುವಂತೆ ಚಿತ್ರಗಳನ್ನು ಬಿಡಿಸಲು ಆರಂಭಿಸಿದ ಅವುಗಳಿಂದ ತಾನು ಮಾತನಾಡುವುದರ ಜೊತೆಗೆ ಬರೆಯುವುದರತ್ತ ವಾಲಿಕೊಂಡ. ಹೀಗಾಗಿ ಕನ್ನಡಿಗರು ಹಸ್ತಪ್ರತಿಗಳ ಆಧಾರದೊಂದಿಗೆ ಜ್ಞಾನದಾನ, ಜ್ಞಾನರಕ್ಷಣೆ, ಆಯುರಾರೋಗ್ಯ ನಿವಾರಣೋಪಾಯಗಳನ್ನು ಕಂಡುಕೊಳ್ಳುತ್ತಲೇ ಬಂದರು.

ಹಸ್ತಪ್ರತಿಗಳನ್ನು ಬರೆಯುವ ಮೊದಲು ಇಷ್ಟ ದೇವತೆಯ ಹೆಸರುಗಳಾದ ಶ್ರೀ, ಶುಭಮಸ್ತು, ಬಸವಲಿಂಗಾಯ ನಮಃ ಎಂದೂ ಅಂತ್ಯದಲ್ಲಿ ಮಂಗಳಮಹಾಶ್ರೀಶ್ರೀಶ್ರೀ ಎಂದು ಬರೆಯುತ್ತಿದ್ದರು. ಬರೆಯತ್ತಿರುವ ಗರಿಗಳು ನಿರ್ದಿಷ್ಟ ಅಳತೆಯ ಉದ್ದವಾಗಿದ್ದು ಎಲ್ಲವನ್ನು ಸಮನಾಂತರವಾಗಿ ಜೋಡಿಸಿರುತ್ತಾರೆ. ಬರೆಯುವ ಪ್ರತಿ ಸಾಲುಗಳು ಒಂದೇ ಸಮತಲವಾಗಿದ್ದು ಸುತ್ತಲೂ ಇಂತಿಷ್ಟು ಸ್ಥಳವನ್ನು ಬಿಟ್ಟಿರುತ್ತಾರೆ. ಕಾರಣ ಬರೆದಿರುವ ಅಕ್ಷರಗಳಿಗೆ ಯಾವುದೇ ರೀತಿಯ ಕುಂದುಂಟಾಗದಂತೆ ಆ ಸ್ಥಳ ರಕ್ಷಿಸುತ್ತದೆ. ಪ್ರತಿಯ ನಡುವೆ ಎರಡು ಮೂರು ರಂಧ್ರಗಳಿದ್ದು ದಾರ ಪೋಣಿಸಿರುತ್ತಾರೆ. ಅವುಗಳ ಸುತ್ತಲೂ ಸ್ವಲ್ಪ ಭಾಗ ಬರೆಯದೆ ಬಿಟ್ಟಿರುತ್ತಾರೆ. ಬಲಭಾಗದಲ್ಲಿ ಅಶ್ವಾಸಗಳ ಸಂಖ್ಯೆ ಮತ್ತು

ಹೆಸರು ಬರೆದಿದ್ದು ಪ್ರತಿಗಳು ಕ್ರಮಸಂಖ್ಯೆಯನ್ನು ಹಾಕಿರುತ್ತಾರೆ. ಆಶ್ವಾಸ ಪ್ರಾರಂಭದಿಂದ ಅಂತ್ಯದವರೆಗೂ ಸಾಲುಗಳ ಸಂಖ್ಯೆ ಹಾಕಿರುತ್ತಾರೆ. ಅಲ್ಲದೆ ಒಟ್ಟಾರೆ ಆಶ್ವಾಸಗಳ ಸಂಖ್ಯೆಯನ್ನು ಕೊನೆಯಲ್ಲಿ ಹಾಕಿರುತ್ತಾರೆ. ಕೆಲವೊಂದು ಬರಹದ ಮಧ್ಯದಲ್ಲಿ ಪದ್ಯದ ಅರ್ಥ, ಪದ್ಯಾಂತ್ಯಗಳ ಕೊನೆಯಲ್ಲಿ ದಂಡದ ಗುರುತು ಪದ್ಯದ ಕ್ರಮಸಂಖ್ಯೆ ಮತ್ತು ಕೊನೆಯಲ್ಲಿ ಆಶ್ವಾಸಾಂತ್ಯ ಸೂಚನೆಯಿರುತ್ತದೆ. ಆ ಪ್ರತಿಯಲ್ಲಿ ಸ್ಥಳವಿದ್ದರೆ ಸೂಚನೆಯ ನಂತರ ದಂಡಗುರುತಿಸುತ್ತಾರೆ. ಇದರಲ್ಲಿ ಶೀ ಕಾರ, ಪದ್ಮ ಇತ್ಯಾದಿ ಮಂಗಳಕರ ಚಿಹ್ನೆಗಳನ್ನು ಬರೆದಿರುತ್ತಾರೆ. ಮತ್ತೊಂದು ಪ್ರತಿಯಲ್ಲಿ ಹೊಸ ಅಶ್ವಾಸ ಪ್ರಾರಂಭಮಾಡುತ್ತಾರೆ, ಪ್ರತಿಯ ಕೊನೆಯ ಹಂತದಲ್ಲಿಯೂ ಇದೇ ರೀತಿ ಮುಂದುವರೆಸಿ. ಅಲಿಖಿತ ಪತ್ರಗಳನ್ನು ಸೇರಿಸಿ ಇವುಗಳಲ್ಲಿ ನಕ್ಷೆ ಹಾಗೂ ವರ್ಣಚಿತ್ರಗಳಿಂದ ಅಲಂಕರಿಸಿರುತ್ತಾರೆ. ಲಿಪಿಕಾರರೂ ಅಕ್ಷರಗಳ ಜೊತೆಯಲ್ಲಿ ಚಿತ್ರಕಲೆಯನ್ನು ಕರಗತಮಾಡಿಕೊಂಡಿರುತ್ತಿದ್ದರು.

ಹಸ್ತಪ್ರತಿಗಳ ಲಿಪಿಕಾರರು ವಿವಿಧ ಗುರು ಮಠಗಳ ಆಶ್ರಯದಲ್ಲಿ ಬೆಳೆದು ಬಂದಿದ್ದು ಕಾಣುತ್ತದೆ. ಇದೊಂದು ಕಾಯಕ. ಸತತ ಅಭ್ಯಾಸ ನಿರತರಾಗಿ ಆ ವೀರಮಾಹೇಶ್ವರರ ಅನುಗ್ರಹದಲ್ಲಿ ಬರಹ ಕೈಗೊಂಡಿದ್ದೇವೆ ಎಂದು ಬರೆಯುವ ಮೂಲಕ ದೇವರ ಹೆಸರಿನಲ್ಲಿ ಲಿಪಿಗೈಯುತ್ತೇವೆ. ಪಂಚಭೂತಗಳ ಸಾಕ್ಷಿಯಾಗಿ ಬರೆಯುತ್ತೇವೆ ಎನ್ನುವಲ್ಲಿ ನಂಬಿಕೆ ಆಳವಾಗಿ ಬೇರೂರಿದ್ದನ್ನು ಕಾಣಬಹುದು. ಇವರು ಯಾವುದೇ ಧರ್ಮಗಳ ಮಧ್ಯ ಬೆಳೆದರೂ ಬರವಣಿಗೆಯು ಒಂದೇ ರೂಪದಲ್ಲಿ ಕಾಣುವುದಿಲ್ಲ. ತಮ್ಮ ಆಸಕ್ತಿಯಂತೆ ಲಿಪಿಗೈದಿರುವುದನ್ನು ಕಾಣುತ್ತೇವೆ. ಲಿಪಿಗೈಯುವ ವಿಷಯವೂ ಕೂಡ ಸಾರ್ವಜನಿಕರೊಂದಿಗೆ ಚರ್ಚೆ ಸಂವಾದಗಳನ್ನು ಏರ್ಪಡಿಸಿಕೊಂಡು ಅವರ ನಿಲುವುಗಳನ್ನು ಆಧರಿಸಿಕೊಂಡು ನಡೆಯುತ್ತಿತ್ತು. ಬರೆಯುವ ಮೊದಲು ಹಾಗೂ ಅಂತ್ಯಕ್ಕೆ ಶುಭದಿನಗಳನ್ನೇ ಆರಿಸಿಕೊಳ್ಳುತ್ತಿದ್ದರು. ನಿರ್ದಿಷ್ಟ ಸಮಯ ನಿಖರಪಡಿಸಿಕೊಳ್ಳತ್ತಿದ್ದರು. ಅಶೌಚಪ್ರಾಪ್ತರಾದಾಗ ಲಿಪಿಗೈಯುತ್ತಿರಲಿಲ್ಲ. ದೈಹಿಕ ಶ್ರಮದಿಂದ ಮಾತ್ರ ವಂಚಿತರಾಗಿದ್ದು ಇನ್ನುಳಿದಿರುವುದರಲ್ಲಿ ಮೇಲುಗೈ ಸಾಧಿಸಿದ್ದರು. ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರದಲ್ಲಿಯೂ ಘನತೆ ಗೌರವಗಳೊಂದಿಗೆ ಕಾಣುತ್ತಿದ್ದರು. 'ಸರಸ ಸಂಗೀತ ನಿಪುಣಂ ಬಹುಲಿಪಿಜ ಭೂಸುರವರ ವಿರೂಪಾಕ್ಷಸುತ ಲಿಂಗಮಂತ್ರಿಪಂ'.[೩೭] ಲಿಪಿಕಾರರು ಕನ್ನಡ ಭಾಷೆಯಲ್ಲಿ ಬಹು ಚಾಣಾಕ್ಷತೆ ಹೊಂದಿದ್ದು ಮತ್ತು ವಿವಿಧ ಲಿಪಿಗಳನ್ನು ಬಲ್ಲಂಥವರಿದ್ದರು. ಸುಂದರಲೇಖನ, ಸಣ್ಣಲೇಖನ, ಅಲಂಕಾರಲೇಖನ, ಶೀಘ್ರಲೇಖನ ಬಹುಲಿಪಿ ಲೇಖನದ ವ್ಯವಸಾಯ ಮತ್ತು ಅಭಿರುಚಿಗಳನ್ನು ಇವರಲ್ಲಿ ಕಾಣುತ್ತೇವೆ. ಪ್ರಮುಖರಾದ ಚಿಕ್ಕಯ್ಯನವರ ತಮ್ಮ ಅಭಿಪ್ರಾಯದಂತೆ ....'ಇಕ್ಕೆಲದಭಯಂ ಪಲಗೆ ಯಷ್ಟಲೋವೆಯಷ್ಟು ಮೂಲೆಗಳಿಂದತ್ಯಂತಲಂಕಾರವಾಗಿ ಕಣ್ಣೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯ ಶಿವಾಲಯುವಂ ನಿರ್ಮಿಸಿದಂತಿರಬೇಕು'.[೩೮] ತನ್ನ ಪ್ರತಿಯಾದ ವೀರಮಹೇಶ್ವರಾಚಾರ ಸಂಗ್ರಹದಲ್ಲಿ ಹಸ್ತಪ್ರತಿಗಳು ಮೇಲೆ ಕೆಳಗೆ ಎರಡು ಹಲಗೆಗಳಿದ್ದು ಅವುಗಳ ಎಂಟು ಮೂಲೆಯೂ ಚಿತ್ರರಂಜಿತವಾಗಿ ಶಿವಾಲಯ ಮೂರ್ತಿಯಂತೆ ಕಂಗೊಳಿಸುತ್ತಿದ್ದು ಅಕ್ಷರಗಳು ವೈವಿಧ್ಯ, ಅಲಂಕಾರಗಳು ಕಣ್ಣಿಗೆ ಕಟ್ಟುವಂತಿರಬೇಕೆಂದು

ಹೇಳಿಕೊಂಡಿದ್ದಾರೆ. ಹಸ್ತಪ್ರತಿಗಳಲ್ಲಿ ಸುಂದರ ಲೇಖನವು ಕನ್ನಡ ಅಕ್ಷರಗಳನ್ನು ಬಹು ಅರ್ಥವತ್ತಾಗಿ ವ್ಯಾಪಕವಾಗಿ ತನ್ನದೇ ಆದ ನೆಲೆಯಲ್ಲಿ ಇರುವಂತೆ ಮೂಡಿ ಬಂದಿದೆ.

‘ಪೊಕ್ಕಳು ತಲೆಕಟ್ಟುಮನ।
ನ್ತರದವಯವಮನವಿದು ಖಂಡರಿಸಲು ಕೀ।
ಇಕ್ಕುಡನೆ ಬಲ್ಲನರಿಯ।
ರ್ಮಿಕ್ಕವರೆನ್ತೊಸೆದು ಧರಣಿ ಬಣ್ಣಸುತಿಕ್ಕುಂ॥’[೩೯]

ಲಿಪಿಕಾರರು ಪ್ರತಿಯೊಬ್ಬರು ತಮ್ಮದೇ ಆದ ಶೈಲಿಯಲ್ಲಿ ಲಿಪಿಗೈಯುತ್ತಿದ್ದರು. ಕನ್ನಡ ಅಕ್ಷರಗಳು ಒಂದೊಂದು ರೂಪದಲ್ಲಿ ಚೌಕಟ್ಟುದುಂಡಾಗಿ ಒಂದು ಅಕ್ಷರ ಇನ್ನೊಂದು ಅಕ್ಷರಕ್ಕೆ ಹೋಲುವಂತೆ ಒಂದೇ ಸಮತಲ ರೇಖೆಯಲ್ಲಿರುವಂತೆ ಪದಗಳ ಅರ್ಥ ವಿಷಯದೊಂದಿಗೆ ಸ್ಪಷ್ಟವಾಗಿ ಮಾತನಾಡುವಂತೆ ಸಹಕರಿಸುತ್ತವೆ. ಆಕಾರಗಳು ಕೊಂಬುಗಳು ವಿವಿಧ ವಿನ್ಯಾಸಗಳೊಂದಿಗೆ ಕಣ್ಣಿಗೆ ಸ್ಪಷ್ಟವಾಗಿ ಕಾಣುತ್ತವೆ.

‘ಶರನಿಧಿಯೊಳ್ನೆಲೆ (ಸಿ) (ದು) ವಂ।
ಸರಸಿಜಭವನಾಯ್ದು ಕೊಣ್ಡು ವಾಗ್ದೇವಿಗೆ ಬಿ
ತ್ತರದಿಂದೆ ಸಮೆದ ಮುತ್ತಿನ
ಸರಿಗೆಯನನುಕರಿಪುದಲ್ತೆ ಬಲ್ಲೆಯ ಲಿಖಿತಂ.[೪೦]

ಲಿಪಿಕಾರನಾದ ಬಲ್ಲೆಯನು ಸುಂದರ ಅಕ್ಷರಗಳಿಂದ ಮುತ್ತಿನ ಸರ, ಸರಿಗೆ, ಕೊರಳ ಮುತ್ತುಗಳಾಗಿ ಸರಸ್ವತಿಯ ಕೊರಳಲ್ಲಿ ಮಾಲೆಗಳಂತಿವೆ ಅಲ್ಲದೆ ಅಷ್ಟದಿಕ್ಪಾಲಕರಂತೆ ಅಕ್ಷರದ ಮುತ್ತುಗಳು ಒಂದೊಂದು ವ್ಯತಿರಿಕ್ತವಾಗಿ, ಅರ್ಥ ವತ್ತಾಗಿ ಮಾತನಾಡಲು ಸಹಾಯವಾಗುತ್ತವೆ. ‘ಮಾತೇ ಮುತ್ತು, ಮಾತೇ ಮೃತ್ಯ’, ‘ಮಾತು ಆಡಿದರೆ ಹೋಯ್ತು, ಮುತ್ತು ಹೊಡೆದರೆ ಹೋಯ್ತು’ ಎಂಬ ಗಾದೆಗಳಂತೆ ಮಾತಿನ ಮೌಲ್ಯ ಏನೆಂಬುದನ್ನು ಅಕ್ಷರಗಳ ಮಾಲೆಯಲ್ಲಿ ಒಂದು ಮಾತಿನಲ್ಲಿಯೇ ತಿಳಿಸಿಕೊಡುತ್ತವೆ. ‘ಮುತ್ತು ಕಂಡೀರೆನಮ್ಮ ಬಲ್ಲಂಥವರು ಮುತ್ತು ಕಂಡಿರೆನಮ್ಮ ಎಂದು ತತ್ವಪದಕಾರರು ತಮ್ಮ ಹಾಡುಗಳೊಂದಿಗೆ ಜನರ ಆಸಕ್ತಿ, ಗಮನವನ್ನು ತಮ್ಮತ್ತ ಸೆಳೆದು ಭಕ್ತಿಯ ಮಾರ್ಗವನ್ನು ನಲಿದಾಡುವಂತೆ ಮಾಡಿದ್ದಾರೆ.

ಹಸ್ತಪ್ರತಿಗಳು ಸಣ್ಣಲಿಪಿ ಲೇಖನದಲ್ಲಿಯೂ ಅಕ್ಷರಗಳ ವಿಸ್ತೃತ ಕಡಿಮೆ ಇದ್ದು. ಬಹುಬೇಗ ಬರೆಯುವಂತೆ ಸಹಕರಿಸುತ್ತದೆ. ವಿಷಯದ ಮೇಲೆ ಶ್ರದ್ಧೆ, ನಂಬಿಕೆ ಆಲೋಚನೆ ತಾಳ್ಮೆ, ಏಕಾಗ್ರತೆ ಇಲ್ಲಿ ‘ಚೆನ್ನವೀರದೇವರು ಸಣ್ಣ ಬರಹದ ಗುರುನಂಜಯ್ಯನವರಿಗೆ ಲೇಖನವ ಬರೆದು ಕೊಟ್ಟ’[೪೦] ಸಣ್ಣಬರಹದ ಲಿಪಿಕಾರರಲ್ಲಿ ಗುರುಬಸವ ರಾಜದೇವರು ಪ್ರಮುಖರಾಗಿದ್ದರು. ಈ ಅಕ್ಷರಗಳು ಕಾಣುವ ದೃಶ್ಯ ನೋಟಕ್ಕೆ ಸಣ್ಣ ರೇಷ್ಮೆಯ ಹುಳುಗಳಂತೆ ಕಾಣುತ್ತಿದ್ದು ಪ್ರತಿ ಸಮಯವನ್ನು ಕೂಡ ಉಳಿಸುವುದು ಕಂಡುಬರುತ್ತದೆ.

ಲಿಪಿಕಾರರು ಬರೆದಿರುವ ಹಸ್ತಪ್ರತಿಗಳಲ್ಲಿ ಅಲಂಕಾರಗೊಂಡಿರುವ ಶಬ್ದಗಳು ಓದುಗರಿಗೆ ಆಶ್ಚರ್ಯವನ್ನುಂಟು ಮಾಡುತ್ತವೆ. ಅಕ್ಷರಗಳಲ್ಲಿ ಕೆಲವೊಂದು ನಕ್ಷೆ ಚಿತ್ರಗಳ ಮೂಲಕ ಹಸ್ತಪ್ರತಿಗಳಿಗೆ

ಹೊಸ ಮೆರಗನ್ನುಂಟು ಮಾಡುತ್ತವೆ. ಲೇಖನಕಾರನಿಗೆ ಅಕ್ಷರಗಳ ಒಂದೊಂದು ಅಂಗವು ತನ್ನದೇ ಆದ ಒಂದೊಂದು ಅಲಂಕಾರಗಳೊಂದಿಗೆ ಕಾಣುತ್ತವೆ. ಈ ಅಲಂಕಾರಗಳೇ ಅಕ್ಷರಗಳಿಗೆ ಶೋಭೆಯನ್ನುಂಟುಮಾಡುತ್ತವೆ. ಲಿಪಿಕಾರ ಬರವಣಿಗೆಯಲ್ಲದೆ ಇತರ ಕಲೆಗಳಲ್ಲಿಯೂ ಕಲಾಸಕ್ತನಾಗಿರಬೇಕಾದುದು ಅನಿವಾರ್ಯವಾಗಿತ್ತು.

ಅಕ್ಷರಗಳು ವಿಶೇಷ ಅಲಂಕೃತಗೊಂಡಿರುವುದು ಶಾಸನಗಳಲ್ಲಿ ಹಸ್ತಪ್ರತಿಗಳಲ್ಲಿ ಇದು ಅಲ್ಪಪ್ರಮಾಣದಲ್ಲಿ ಚಿತ್ರೀತಗೊಂಡಿವೆ. 'ದಿ.....ಳ್ ಹಸ್ತಿಸಂಗಂ ಹರಿಣಿಯ ರೂಹಗೆಯಕ್ಖರಾವಳಿಯಿಂದಂ। ಬರೆಯ...ದಡೆ ಪುರದಿ (ಡಿ) ಸವೆ(೯) ಡೆಲೆವೊ ರೇವಣಾರ್ಯ್ಯನೊಳೆಂದಂ॥'.[೪೨] ಹೀಗೆ ಶಾಸನ ಪದ್ಯದಲ್ಲಿ ಉಲ್ಲೇಖವಿದೆ ಬರೆದಿರುವ ಅಕ್ಷರಗಳಲ್ಲಿ ಆನೆ, ಸಿಂಹ, ಜಿಂಕೆ, ಮತ್ತು ಗಿಳಿಗಳನ್ನು ಲಿಪಿಯಲ್ಲಿ ಗೈದಿರಬಹುದೆಂಬ ಅಭಿಪ್ರಾಯವನ್ನು ಸೂಚಿಸುತ್ತದೆ. ಲಿಪಿಕಾರರಲ್ಲಿ ಶಾಸನಲಿಪಿಕಾರನಾದ ರೂವಣ, ಚಂದ, ಬಾಸ್ಕರಯ್ಯ ಮತ್ತು ಚಿತ್ರಲಿಪಿಕೋವಿದನಾಗಿದ್ದ ರಾಯಸ್ತಕೊಂಡ ಮರಸಯ್ಯ ಇವರೆಲ್ಲರೂ ಪ್ರಮುಖರಾಗಿದ್ದಾರೆ. ಅಲಂಕಾರ ಲೇಖನದಲ್ಲಿ ಕವಿ ವಿಠ್ಠಲನ 'ವಿದಗ್ದ ಚೂರಾಮಣಿ' ಎಂಬ ಹಸ್ತಪ್ರತಿಯಲ್ಲಿ ಕೆಲವೊಂದು ಮಂಗಳಕರವಾದ ಚಿಹ್ನೆಗಳಾದ ಸ್ವಸ್ತಿಕ, ಪದ್ಮ, ಶಂಕ, ಚಕ್ರ, ನಕ್ಷತ್ರ, ಸೂರ್ಯ, ಮತ್ತು ಚಂದ್ರ ಹೀಗೆ ವಿವಿಧ ವಿನ್ಯಾಸಗಳು ಅಲ್ಲಲ್ಲಿ ಕಂಡು ಬರುತ್ತವೆ. ಇಂತಹ ಹಸ್ತಪ್ರತಿಗಳು ಓದುಗರ, ನೋಡುಗರ ಕಣ್ಣಿಗೆ ವಿಸ್ಮಯಕರವಾಗಿ ಕಾಣುತ್ತವೆ.

ಲಿಪಿಕಾರರಲ್ಲಿ ತೀಕ್ಷಣ ಮತಿಗಳು ಮತ್ತು ಮಂದಮತಿಗಳಿರುವಂತೆ ಲಿಪಿಗೈಯುವುದರಲ್ಲಿಯೂ ಶೀಘ್ರವಾಗಿ ಹಾಗೂ ನಿಧಾನಗತಿಯಲ್ಲಿ ಬರೆಯುವವರನ್ನು ಕಾಣಬಹುದು. ಶೀಘ್ರಗತಿಯಲ್ಲಿ ಬರೆಯುತ್ತಿದ್ದು ಅಷ್ಟೇ ತೀಕ್ಷಣ ಮತಿಗಳಾಗಿಯೂ ಇರುವುದು ಕಂಡುಬಂದಿದೆ. 'ದ್ರುತ ಲೇಖಿ ಚ ತೇಜಸ್ವಿಯೋ ಲೇಖಯಲೆ ಲೇಖಕಃ.[೪೩] ಎಂದು ಭವಿಷ್ಯ ಪುರಾಣವು ಹೇಳುತ್ತದೆ. ಒಬ್ಬ ಲೇಖಕನಿಗೆ ಸಮಯ ನಿಷ್ಠೆ, ಪ್ರಜ್ಞೆ, ಸೃಜನಶೀಲತೆ, ತಾಳ್ಮೆ, ಆತ್ಮವಿಶ್ವಾಸ ಮತ್ತು ಶೀಘ್ರ ಬರವಣಿಗೆ ಇವೆಲ್ಲವುಗಳೂ ಇರಬೇಕಾದುದು ಅವಶ್ಯಕ. ಹೀಗೆ ಲಿಪಿಕಾರರು ಬಹುಲಿಪಿಕೋವಿದರು ಛಪ್ಪನ್ನ ದೇಶ ಚಿತ್ರಲಿಪಿಕೋವಿದರು, ಮತ್ತು ಚತುರ್‌ಭಾಷಾ ಲಿಪಿಕೋವಿದರೂ ಇದ್ದುದರಿಂದಲೇ ಹಸ್ತಪ್ರತಿಗಳು ಇಷ್ಟೊಂದು ವಿಶಾಲವಾಗಿ ಬೆಳೆಯಲು ಅನುಕೂಲವಾಯಿತು ಮತ್ತು ಹವ್ಯಾಸಿ, ನೇಮಿತ ಹಾಗೂ ವೃತ್ತಿಲಿಪಿಕಾರರಾಗಿ ತಮ್ಮ ನಿಷ್ಠೆಸೇವೆಸಲ್ಲಿಸಿದ್ದಾರೆ.

ಈ ಹಸ್ತಪ್ರತಿಗಳಲ್ಲಿ ಅಕ್ಷರಗಳ ವೈವಿಧ್ಯ ಮನೋರಂಜಿತವಾಗಿವೆ. ಲಿಪಿಗೈಯುತ್ತಿರುವಾಗ ಕಲ್ಪನೆಯ ಕಣ್ಣುಗಳಂತೆ ಅಲ್ಲಲ್ಲಿ ಚಿತ್ರೀತಗೊಂಡಿರುತ್ತವೆ. ಇದರಿಂದ ಬರವಣಿಗೆ ಸ್ಪುಟವಾಗುವಂತೆ ಓದುಗರ ಆಸಕ್ತಿ ಕೆರಳಿಸುವಂತೆ, ನೊಡುಗರೊಂದಿಗೆ ಸಂತೋಷವನ್ನುಣಬಡಿಸುತ್ತವೆ. ಬರವಣಿಗೆಯಲ್ಲಿ ಸುಂದರಲಿಪಿ, ಸಣ್ಣಲಿಪಿ, ದೊಡ್ಡಲಿಪಿ, ಅಲಂಕಾರಲಿಪಿ ಮತ್ತು ಶೀಘ್ರಲಿಪಿಗಳು ಲೇಖಕರಿಗೆ ತನ್ನದೇ ಆದ ಮಾರ್ಗಗಳನ್ನು ಕಂಡುಕೊಳ್ಳವಂತೆ ಬರವಣಿಗೆಯ ಕಲೆ ಎಲ್ಲರನ್ನು ಕೈ ಬೀಸಿ ಕರೆಯುತ್ತದೆ.

**ಕೊನೆ ಟಿಪ್ಪಣಿ**

೧. ವಿ.ಎಸ್.ಬಡಿಗೇರ, ಹಲಗೆ ಬಳಪ, ೩೫, ೨೦೦೫
೨. ಎಸ್.ಆರ್.ಚೆನ್ನವೀರಪ್ಪ, ಹಸ್ತಪ್ರತಿ ವ್ಯಾಸಂಗ-೬, ಪು.೯೮, ೨೦೦೬
೩. ಎ.ವಿ.ನಾವಡ, ಎಸ್.ಎಸ್.ಅಂಗಡಿ, ಹಸ್ತಪ್ರತಿ ವ್ಯಾಸಂಗ-೧, ಪು.೧೪, ೨೦೦೨
೪. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ೯೩, ೧೯೯೨
೫. ಚಿ.ಸಿ.ಲಿಂಗಣ್ಣ, ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಪು.೧೨, ೨೦೦೮
೬. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪು.೧೧೫, ೧೯೯೨
೭. ಎಸ್.ಕೆ.ಕೊಪ್ಪ, ಅಲ್ಲಮಪ್ರಭು ಚಿಂತನ, ಪು.೧೬೨, ೨೦೦೪
೮. ವಿ.ಎಸ್.ಬಡಿಗೇರ್, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೧೬೩, ೨೦೦೬
೯. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪು.೧೨೫, ೧೯೯೨
೧೦. ಅದೇ, ಪು.೧೩೩, ೧೯೯೨
೧೧. ಅ.ನ.ಕೃಷ್ಣರಾಯ, ಸರ್ವಜ್ಞ ಕವಿ, ಪು.೧೬, ೨೦೦೨
೧೨. ಬಸವರಾಜ ಕಲ್ಗುಡಿ(ಸಂ), ಸುವರ್ಣ ವಿಚಾರ ಸಾಹಿತ್ಯ, ಪು.೧೬೦, ೨೦೦೬
೧೩. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪು.೨೧, ೧೯೯೨
೧೪. ಎಂ.ಎಂ.ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು.೧೧, ೧೯೯೩
೧೫. ಅದೇ, ಪು.೧೪, ೧೯೯೩
೧೬. ಅದೇ, ಪು.೧೪. ೧೯೯೩
೧೭. ಅದೇ, ಪು.೧೫, ೧೯೯೩
೧೮. ಆಲ್ಬರ್ಟಿನ್‌ಗೌರ್, ಪ್ರಾಚೀನ ಲೇಖನ ಹಸ್ತಪ್ರತಿಶಾಸ್ತ್ರ, ಪು.೬, ೨೦೦೩
೧೯. ಎಂ.ಎಂ.ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು.೧೫, ೧೯೯೩
೨೦. ಆಲ್ಬರ್ಟಿನ್‌ಗೌರ್, ಪ್ರಾಚೀನ ಲೇಖನ ಹಸ್ತಪ್ರತಿಶಾಸ್ತ್ರ, ಪು.೨೭, ೨೦೦೩
೨೧. ಅದೇ, ಪು.೩, ೨೦೦೩
೨೨. ಅದೇ, ಪು.೫, ೨೦೦೩
೨೩. ಅದೇ, ಪು.೯, ೨೦೦೩
೨೪. ಅದೇ, ಪು.೮, ೨೦೦೩
೨೫. ಬಿ.ಎಸ್.ಸಣ್ಣಯ್ಯ, ಹಸ್ತಪ್ರತಿಶಾಸ್ತ್ರ ಪರಿಚಯ, ಪು.೮, ೧೯೯೨
೨೬. ಅದೇ, ಪು.೫, ೧೯೯೨
೨೭. ಅದೇ, ಪು.೫, ೧೯೯೨
೨೮. ಅದೇ, ಪು.೬, ೧೯೯೨
೨೯. ಆಲ್ಬರ್ಟಿನ್‌ಗೌರ್, ಪ್ರಾಚೀನ ಲೇಖನ ಸಾಮಗ್ರಿಗಳು. ಪು.೩೫, ೨೦೦೩
೩೦. ಅದೇ, ಪು.೩೭, ೨೦೦೩
೩೧. ವಿ.ಎಸ್.ಬಡಿಗೇರ್, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯನೆಲೆಗಳು, ಪು.೧೩೨, ೨೦೦೬
೩೨. ಎಂ.ವಿ.ಸೀತಾರಾಮಯ್ಯ, ಆರ್.ಶೇಷಶಾಸ್ತ್ರಿ(ಸಂ), ಮಣಿಹ. ಪು.೧೬೯, ೧೯೯೨
೩೩. ಅದೇ, ಪು.೧೭೦, ೧೯೯೨

೩೪. ಎಫ್.ಟಿ.ಹಳ್ಳಿಕೇರಿ, ಕೆ.ರವೀಂದ್ರನಾಥ(ಸಂ), ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ–೧, ಪು.೨೩೦, ೨೦೦೦

೩೫. ವಿ.ಎಸ್.ಬಡಿಗೇರ್, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯನೆಲೆಗಳು, ಪು.೧೯, ೨೦೦೬

೩೬. ಅದೇ, ಪು.೧೦೦, ೨೦೦೬

೩೭. ಅದೇ, ಪು.೧೪೭, ೨೦೦೬

೩೮. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪು.೧೬೨, ೧೯೯೨

೩೯. ವಿ.ಎಸ್.ಬಡಿಗೇರ್, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯನೆಲೆಗಳು, ಪು.೧೪೮, ೨೦೦೬

೪೦. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪು.೧೬೩, ೧೯೯೨

೪೧. ಅದೇ, ಪು.೧೬೫, ೧೯೯೨

೪೨. ಅದೇ, ಪು.೧೬೪, ೧೯೯೨

೪೩. ಅದೇ, ಪು.೧೬೬, ೧೯೯೨

□□□

ಐದು

# ಸಮಾರೋಪ

ಕನ್ನಡ ಹಸ್ತಪ್ರತಿಗಳು ನೆಲದ ಮರೆಯ ವಿಧಾನದಂತೆ ಹೊರತೆಗೆದು ನೋಡಿದಂತೆಲ್ಲ ಹೊಸ ಹೊಸ ಸಂಗತಿಗಳನ್ನು ತಿಳಿಯಪಡಿಸುತ್ತವೆ. ವ್ಯಕ್ತಿ ಒಂದು ನಿರ್ದಿಷ್ಟ ಪಥವನ್ನು ಕಂಡುಕೊಳ್ಳುವಂತೆ ಸಹಕರಿಸುತ್ತದೆ. ಧಾರ್ಮಿಕವಾಗಿ, ಸಾಮಾಜಿಕವಾಗಿ, ನೋಡಿದಾಗ ದಾರ್ಶನಿಕತೆಯತ್ತ ಅವುಗಳ ಒಲವು ಹೆಚ್ಚಾಗುತ್ತದೆ. ಅದರಂತೆ ಒಂದು ಧರ್ಮವನ್ನು ಅನುಸರಿಸಿಕೊಂಡು ಆ ಧರ್ಮದಲ್ಲಿಯೇ ದಿವ್ಯದರ್ಶನವನ್ನು ಪಡೆದು ಮೋಕ್ಷ ಪಥದಲ್ಲಿ ಲೀನರಾಗುವಂತೆ ಪ್ರೇರೇಪಿಸುತ್ತವೆ. ಧರ್ಮ ಹಾಗೂ ಮೇಲಾಟಗಳು ಧಾರ್ಮಿಕ ಕೃತಿಗಳು ಪುರಾಣಗಳು, ಪುಣ್ಯಕಥೆಗಳು ಜನರ ತಿಳುವಳಿಕೆಯ ವಿಸ್ತಾರದ ಜೊತೆಗೆ ಧರ್ಮ ಧರ್ಮಗಳಲ್ಲಿ ಸಂಘರ್ಷವನ್ನು ಹುಟ್ಟಿಸುತ್ತವೆ.

ಪ್ರಾಚೀನ ಕಾಲದಲ್ಲಿ ಆದಿಮಾನವನು ತನ್ನ ಯೋಗಕ್ಷೇಮಗಳನ್ನು, ಆಶೆ ಆಮೀಷಗಳನ್ನು ಪೂರೈಸಿಕೊಳ್ಳಲು ಪ್ರಕೃತಿ ದೇವತೆ, ಸೂರ್ಯಚಂದ್ರಾದಿದೇವರುಗಳೆಲ್ಲರೂ ತಮ್ಮ ಪಾಲಿನ ಆದಿದೈವರೆಂದು ತಿಳಿದುಕೊಂಡು ಬೆಳಗಾಗುವುದರೊಳಗೆ ಎದ್ದು ಜಪ ತಪಗಳನ್ನು ಮಾಡಿ ದೇವರ ನಾಮಸ್ಮರಣೆಗಳೊಂದಿಗೆ ಪೂಜಾ ವಿಧಾನಗಳನ್ನು ಅನುಸರಿಸಿಕೊಂಡು ತಮ್ಮ ದಿನನಿತ್ಯದ ಕಾರ್ಯಗಳಲ್ಲಿ ಸಫಲರಾಗುತ್ತಿದ್ದರು. ಪ್ರಸ್ತುತ ದಿನಗಳಲ್ಲಿಯೂ ಕೆಲವೊಬ್ಬರು ಇಂತಹ ನಿಯಮಗಳನ್ನು ಅನುಸರಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು.

ಹಸ್ತಪ್ರತಿಗಳ ಒಡಲೊಳಗೆ ರಾಜಕೀಯ, ಸಾಮಾಜಿಕ, ಆರ್ಥಿಕ, ದಾರ್ಶನಿಕ ಸಂಗತಿಗಳು ಅಡಕವಾಗಿವೆ. ಶ್ರಮದ ಮೇಲುಕೀಳು ಲಿಪಿಕಾರರನ್ನು ಮೂಲೆಗುಂಪು ಮಾಡಿ ಕವಿಯನ್ನು ಶ್ರೇಷ್ಠವಾಗಿಸಿದೆ. ಓದು ಬರಹ ಕೆಲವರ ಸೊತ್ತು ಎನ್ನುವ ಜೀವವಿರೋಧಿ ಸೆಲೆಗಳನ್ನು ಹುಟ್ಟು ಹಾಕಲಾಗಿದೆ. ವೇದಗಳನ್ನು ಬರೆದಿಡುವವರು ನರಕಕ್ಕೆ ಹೋಗುತ್ತಾರೆ ಎನ್ನುವ ಭಯಗಳನ್ನು ಸೃಷ್ಟಿಸಲಾಗಿದೆ.

ಕನ್ನಡ ಹಸ್ತಪ್ರತಿಗಳು ದೈವೀರೂಪಗಳಾಗಿ ವಿಸ್ತೃತಗೊಳ್ಳುತ್ತ ಬಂದಿವೆ. ದೈವೀಕತೆ ಜ್ಞಾನಕ್ಕಿಂತಲೂ ಮಿಗಿಲಾದುದು ಎಂಬುದನ್ನು ನಮ್ಮ ಸಂಸ್ಕೃತಿ ಗುರುತಿಸುತ್ತದೆ. ಪ್ರತಿಯೊಂದು ಕಾರ್ಯಕಲಾಪಗಳಲ್ಲಿಯೂ

ಮಾನವನಿಗೆ ಸ್ನೇಹ ಜೀವಿಯಾಗಿ ಇದ್ದು ತನ್ನ ದಾರ್ಶನಿಕ ಗುಣಗಳನ್ನು ತಿಳಿಸಿಕೊಡುತ್ತಾ ಬಂದಿರುವುದನ್ನು ಕಾಣುತ್ತೇವೆ. ವ್ಯಕ್ತಿಯನ್ನು ವಿಭುದರನ್ನಾಗಿ ಮಾಡಿವುದರಲ್ಲಿಯೇ ಬರಹದ ಸಾರ್ಥಕತೆ ಇದೆ. ಧಾರ್ಮಿಕ ಕೃತಿಗಳು ಧರ್ಮದೊಂದಿಗೆ ಆಶ್ರಯದಾತರನ್ನು ಆಯಾ ಧರ್ಮದ ತಾತ್ವಿಕತೆಯನ್ನು ಉನ್ನತೀಕರಿಸುತ್ತ ಪಸರಿಸುತ್ತ ಬಂದಿವೆ. ಮಹಾಭಾರತ ಕಥೆಗಳನ್ನು ಹೇಳುವುದರಿಂದಲೂ ಮತ್ತು ಕೇಳುವುದರಿಂದಲೂ ಮೋಕ್ಷ ಪ್ರಾಪ್ತಿಯಾಗುತ್ತದೆಂಬ ನಂಬಿಕೆ ಇಂದಿಗೂ ಇದೆ.

ಕನ್ನಡ ಹಸ್ತಪ್ರತಿಗಳು ಸಾಂಸ್ಕೃತಿಕ ಕ್ಷೇತ್ರದಲ್ಲಿ ಬಹುಮುಖ್ಯವಾದ ಪಾತ್ರವಹಿಸುತ್ತ ಬಂದಿವೆ. ಬರವಣಿಗೆಯೆಂಬುದು ದೈವೀನೆಲೆಯಾಗಿತ್ತು. ಬರವಣಿಗೆಯನ್ನು ಮೊದಲು ಪ್ರಾರಂಬಿಸಿದ್ದು ಜೈನಯತಿಗಳು. ಲಿಪಿಕಾರರು ಕೃತಿಯನ್ನು ಬರೆಯುತ್ತಿರುವಾಗ ಮೊದಲು ವಿಷಯ ಪ್ರಸ್ತಾಪ ಮಾಡಿಕೊಂಡು ಸರ್ವರಲ್ಲಿ ಒಪ್ಪಿಗೆ ಪಡೆದುಕೊಂಡು ಅವರ ನಿಲುವುಗಳಲ್ಲೆವುಗಳನ್ನು ಅನುಸರಿಸಿಕೊಂಡು ಲಿಪಿಗೈಯುತ್ತಿದ್ದರು. ಪ್ರಾರಂಭ ಅಂತ್ಯದಲ್ಲಿ ಪೂಜೆ ಪುನಸ್ಕಾರಗಳನ್ನು ಕಡ್ಡಾಯವಾಗಿ ಮಾಡುತ್ತಿದ್ದರು. ಇದರಿಂದ ಅವರಲ್ಲಿಯ ತಾಳ್ಮೆ, ಶ್ರದ್ಧೆ, ದೈವ ಭಕ್ತಿಗಳೆಲ್ಲವುಗಳನ್ನು ಪಾಲಿಸುವ ಶಕ್ತಿ ಬರುತ್ತಿತ್ತು. ಬರವಣಿಗೆ ಹೆಚ್ಚೆಚ್ಚು ಬೆಳೆದಂತೆ ಬರವಣಿಗೆಯ ಸಾಮಗ್ರಿಗಳಾಗಿ ಬಿದಿರು, ತೊಗಟೆ, ಕಂಚು, ಹಿತ್ತಾಳೆ ಮತ್ತು ತಾಳೆಗರಿಗಳು ವಿಶೇಷವಾಗಿ ಬಳಸಿಕೊಳ್ಳಲು ಸುರುವಾದವು. ಇನ್ನುಳಿದವುಗಳಲ್ಲಿ ಬರೆದರೆ ಅಕ್ಷರಗಳು ತೀಕ್ಷ್ಣವಾಗಿ ಬಹುಕಾಲದವರೆಗೂ ಇರುತ್ತಿರಲಿಲ್ಲ. ಆದ್ದರಿಂದಲೇ ಹೆಚ್ಚಾಗಿ ತಾಳೆಗರಿಗಳನ್ನು ಆಧರಿಸಿಕೊಂಡು ಬರೆದರು. ಈ ಗರಿಗಳ ಆಯಸ್ಸು ಒಂದು ಸಾವಿರ ವರ್ಷ ಎಂಬುದು ನಂಬಿಕೆ.

ಈ ಕನ್ನಡ ಹಸ್ತಪ್ರತಿಗಳು ಒಟ್ಟಾರೆ ಮಾನವನನ್ನು ಸಂಸ್ಕೃತರನ್ನಾಗಿಸಿ ತಾನು ತನ್ನ ಸುತ್ತಲಿನ ಜನರನ್ನು ಒಂದಾಗಿ ಬೆರೆತು ಎಲ್ಲರೊಂದಿಗೆ ನಗುನಗುತ್ತಲಿರುವುದರೊಳಗೆ ವಿದ್ಯೆ, ವಿನಯ, ದಯೆ, ದಾಕ್ಷಿಣ್ಯತೆ, ಧರ್ಮ, ನೀತಿ, ನಿಯಮ, ಸತ್ಯ ಸಂಪ್ರದಾಯಗಳನ್ನು ಅನುಸರಿಸಿಕೊಂಡು ತಾನು ಒಬ್ಬ ಶ್ರೇಷ್ಠ ನಾಗರೀಕರನ್ನಾಗಿ ಮಾಡುವುದು. ಅಲ್ಲದೆ ಅಜ್ಞಾನದ ಅಂಧಕಾರದಲ್ಲಿದ್ದವರನ್ನು ಜ್ಞಾನಿಗಳನ್ನಾಗಿಸುವುದು ಮತ್ತು ಉನ್ನತ ಗುಣಗಳನ್ನು ಪಡೆದುಕೊಂಡು ಮೋಕ್ಷಪಥರನ್ನಾಗಿಸುವುದು ಇದರಿಂದ ತನ್ನ ಹೆಸರನ್ನು ಚಿರಸ್ಥಾಯಿಯಾಗಿ ಉಳಿಸಿಕೊಳ್ಳುವಂತೆ ಮಾಡುತ್ತವೆ. ತನ್ನೊಂದಿಗೆ ತನ್ನ ಸಂಸ್ಕೃತಿಯನ್ನು ಸಹಜಗುಣಗಳನ್ನು ಬೆಳೆಸಬೇಕೆಂಬುದೇ ಇಲ್ಲಿಯ ಮುಖ್ಯ ಉದ್ದೇಶ.

ಹಸ್ತಪ್ರತಿಗಳ ಕ್ಷೇತ್ರಕಾರ್ಯ ಮಾಡಿ ಇನ್ನಷ್ಟು ಸಂಗ್ರಹಿಸಿ ಅವುಗಳಲ್ಲಿಯ ಮಾಹಿತಿಯನ್ನು ಪುಸ್ತಕ ರೂಪದಲ್ಲಿ ಒಂದೊಂದು ಪ್ರತಿಯನ್ನು ಸ್ಪಷ್ಟವಾಗಿ ಹೊರತರಬೇಕಾದುದು ಇಂದಿನ ದಿನಗಳಲ್ಲಿ ಅತ್ಯಾವಶ್ಯಕವಾಗಿದೆ. ಪೂರ್ವಕಾಲದ ಕಾಲಜ್ಞಾನವನ್ನು ಮುಂದಿನ ಸಮುದಾಯಗಳಿಗೆ ತಿಳಿಯಪಡಿಸಬೇಕಾದರೆ ಈ ಹಸ್ತಪ್ರತಿಗಳೇ ಬಹುಮುಖ್ಯವಾದ ಸಾಧನಗಳಾಗಿವೆ. ಪ್ರಸ್ತುತ ದಿನಗಳಲ್ಲಿ ಯುವಕರಿಗೆ ಸಂಸ್ಕೃತದ ಅರಿವು ತಿಳಿಯದಾಗಿದೆ. ಇವರಿಗೂ ಸಂಸ್ಕೃತರನ್ನಾಗಿಸುವಂತಹ ಯುವಕ ಪ್ರತಿಭೆಗಳಿಗಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಧಾರ್ಮಿಕ ಆಚರಣೆಗಳು, ವಿಚಾರಗಳು ಜನರತ್ತ ಪ್ರಭಾವಗೊಳ್ಳಬೇಕು. ನಮ್ಮ ಸಂಸ್ಕೃತಿಯೆ ನಮ್ಮನ್ನು ಬೆಳೆಸುತ್ತದೆ. ಎನ್ನುವ ಮನೋಭಾವನೆಗಳು ಪ್ರತಿಯೊಬ್ಬರಲ್ಲಿಯೂ ಕಂಡುಬರಬೇಕು. ಆಗ ನಮ್ಮ ಕನ್ನಡ ಸಂಸ್ಕೃತಿಯ ಶ್ರಮ ಸಫಲವಾದಂತಾಗುತ್ತದೆ.

□□□

# ವಿವಿಧ ಆಕಾರಗಳು ಮತ್ತು ಅಲಂಕಾರಗಳು





# ಪರಾಮರ್ಶನ ಗ್ರಂಥಗಳು

೧. ಆಲ್ಬರ್ಟಿನ್‌ಗೌರ್(೨೦೦೩), ಪ್ರಾಚೀನ ಲೇಖನ ಸಾಮಗ್ರಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಕಲಬುರ್ಗಿ ಎಂ.ಎಂ.(೧೯೯೩), ಕನ್ನಡ ಹಸ್ತಪ್ರತಿಶಾಸ್ತ್ರ, ಸ್ನೇಹ ಪ್ರಕಾಶನ, ಬೆಂಗಳೂರು

೩. ಕೊಪ್ಪಾ ಎಸ್.ಕೆ(೨೦೦೪), ಅಲ್ಲಮಪ್ರಭು ಚಿಂತನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪. ಕೃಷ್ಣರಾಯ ಅ.ನ(೨೦೦೨), ಸರ್ವಜ್ಞ ಕವಿ, ಸ್ವಪ್ನ ಬುಕ್‌ಹೌಸ್, ಬೆಂಗಳೂರು

೫. ಚಿದಾನಂದಮೂರ್ತಿ ಎಂ.(೧೯೮೬), ಭಾಷಾ ವಿಜ್ಞಾನದ ಮೂಲ ತತ್ವಗಳು, ಮೂರ್ತಿ ಪ್ರಕಾಶನ, ಮೈಸೂರು

೬ ಚಿದಾನಂದಮೂರ್ತಿ ಎಂ.(೨೦೦೮), ಭಾಷಾ ವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು

೭ ಚಿದಾನಂದಮೂರ್ತಿ ಎಂ.(೨೦೦೨), ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್‌ಹೌಸ್, ಬೆಂಗಳೂರು

೮. ಚೆನ್ನವೀರಪ್ಪ ಎಸ್.ಆರ್(ಸಂ)(೨೦೦೬), ಹಸ್ತಪ್ರತಿ ವ್ಯಾಸಂಗ–೬, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ತಂಬಂಡ ವಿಜಯ ಪೂಣಚ್ಚ(ಸಂ)(೨೦೦೧) ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೪, ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ದೇವರಕೊಂಡಾರೆಡ್ಡಿ(೨೦೦೨), ಲಿಪಿ ಹುಟ್ಟು ಬೆಳವಣಿಗೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೧. ನಾವಡ ಎ.ವಿ, ಎಸ್.ಎಸ್.ಅಂಗಡಿ(ಸಂ)(೨೦೦೨), ಹಸ್ತಪ್ರತಿ ವ್ಯಾಸಂಗ–೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ನಾರಾಯಣ ಕೆ.ವಿ.(ಸಂ)(೨೦೦೭), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೧ ಭಾಷೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಬಸವರಾಜ ಕಲ್ಗುಡಿ(ಸಂ)(೨೦೦೬), ಸುವರ್ಣ ವಿಚಾರ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೧೪. ಮಂಜುನಾಥ ಎಂ.ಜಿ, ಜಿ.ಕೆ.ದೇವರಾಜ(೨೦೦೪), ಕನ್ನಡ ಲಿಪಿ ವಿಕಾಸ, ಪ್ರಕಾಶಕರು ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀ ರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ

೧೫. ಮಾಸ್ತಿ ವೆಂಕಟೇಶ ಐಯ್ಯಂಗಾರ(೧೯೮೩), ಧರ್ಮಸಂರಕ್ಷಣೆ, ಜಿನ ಕಾರ್ಯಾಲಯ, ಬೆಂಗಳೂರು

೧೬. ಮೂರ್ತಿರಾವ್ ಎ.ಎನ್.(೧೯೯೬), ದೇವರು ಜೆ.ಎಚ್.ಕೃಷ್ಣಮೂರ್ತಿ ಪ್ರಕಾಶನ, ಮೈಸೂರು

೧೭. ರಾಮಕೃಷ್ಣ ಜಿ.(ಸಂ)(೨೦೦೫), ವೈಜ್ಞಾನಿಕ ಮನೋಧರ್ಮ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಲಿಂಗಣ್ಣ ಚಿ.ಸಿ(ಸಂ)(೨೦೦೮), ಕನ್ನಡ ಸಾಹಿತ್ಯ ಸಂಸ್ಕೃತಿಕೋಶ, ಶ್ರೀಸಿದ್ದೇಲಿಂಗೇಶ್ವರ ಪ್ರಕಾಶನ, ಗುಲಬರ್ಗಾ

೧೯. ವೀರೇಶ ಬಡಿಗೇರ(೧೯೯೭), ಅಡಿಗಲ್ಲು, ಮಯ ಪ್ರಕಾಶನ, ಕಮಲಾಪುರ

೨೦. ವೀರೇಶ ಬಡಿಗೇರ(೨೦೦೫), ಹಲಗೆ ಬಳಪ, ಮಯ ಪ್ರಕಾಶನ, ಕಮಲಾಪುರ

೨೧. ವೀರೇಶ ಬಡಿಗೇರ(೨೦೦೬), ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೨. ವೀರೇಶ ಬಡಿಗೇರ(೨೦೧೦), ಕನ್ನಡ ಮೋಡಿಲಿಪಿ ಸಂರಚನೆ ಹಾಗೂ ಸಂವರ್ಧನೆ (ಅಪ್ರಕಟಿತ)

೨೩. ವೀರಭದ್ರಪ್ಪ ಬಿ.ವಿ(ಸಂ)(೨೦೦೫), ದೇವರನ್ನು ಕುರಿತು ಒಂದು ಬಹುಮುಖಿ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪. ಶೇಷಗಿರಿರಾವ್ ಎಲ್.ಎಸ್(ಸಂ)(೨೦೦೭), ನಾಗರೀಕತೆಯ ಕಥೆ : ನಮ್ಮ ಪ್ರಾಚ್ಯ ಪರಂಪರೆ–೧, ಕನ್ನಡ ಭವನ ಜೆ.ಸಿ.ರಸ್ತೆ ಬೆಂಗಳೂರು

೨೫. ಸಂಗಮೇಶ ಸವದತ್ತಿಮಠ(೨೦೦೩), ಕನ್ನಡ ಭಾಷಾ ಸ್ವರೂಪ, ರೂಪರಶ್ಮಿ ಪ್ರಕಾಶನ, ಕಲಬುರ್ಗಿ

೨೬. ಸಣ್ಣಯ್ಯ ಬಿ.ಎಸ್.(೧೯೯೨), ಹಸ್ತಪ್ರತಿಶಾಸ್ತ್ರ ಪರಿಚಯ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೨೭. ಸೀತಾರಾಮಯ್ಯ ಎಂ.ವಿ., ಆರ್.ಶೇಷಶಾಸ್ತ್ರಿ(ಸಂ)(೧೯೮೨), ಮಣಿಹ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

೨೮. ಹಳ್ಳಿಕೇರಿ ಎಫ್.ಟಿ., ಕೆ.ರವೀಂದ್ರನಾಥ(ಸಂ)(೨೦೦೦), ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ–೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೯. ಹಳ್ಳಿಕೇರಿ ಎಫ್.ಟಿ., ಕೆ.ರವೀಂದ್ರನಾಥ(ಸಂ)(೨೦೦೬), ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂಪುಟ–೩, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಹಿರೇಮಠ ಬಿ.ಕೆ(೧೯೯೨), ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ವೀರಶೈವ ಅಧ್ಯಯನ ವೇದಿಕೆ, ವಿಜಾಪೂರ

□□□